ಶ್ರೀ ವಿಜಯದಾಸರ

# ತೀರ್ಥ ಕ್ಷೇತ್ರ ಮಹಿಮಾ ಸುಳಾದಿಗಳು



ಜ್ಞಾನ ಪ್ರಸಾರ ಪ್ರಕಾಶನ
ಶ್ರೀ ಗುರು ವಿಜಯದಾಸಾಶ್ರಮ ರಾಯಚೂರು

॥ ಹರಿಃ ಓಂ ॥

## ಶ್ರೀ ವಿಜಯದಾಸರ

# ಶ್ರೀ ತೀರ್ಥ ಕ್ಷೇತ್ರ ಮಹಿಮಾ ಸುಳಾದಿಗಳು

ಪದಗಳು–೫೬  ಸುಳಾದಿಗಳು–೧೦೩



ಶ್ರೀಗುರು ವಿಜಯದಾಸಾಶ್ರಮ
ರಾಯಚೂರು

ಮೊದಲನೇ ಆವರ್ತಿ ೧೦೦೦ ಪ್ರತಿಗಳು

ಸಂಗ್ರಾಹಕರು :

**ಶ್ರೀ ಗುರುಮಧ್ವರಾವ್ ಉಪ್ಪಲಿ**
ಶ್ರೀಗುರು ವಿಜಯದಾಸಾಶ್ರಮ,
ರಾಯಚೂರು

ಪ್ರಕಾಶಕರು :

**ಜ್ಞಾನಪ್ರಸಾರ ಪ್ರಕಾಶನ**
ಶ್ರೀಗುರು ವಿಜಯದಾಸಾಶ್ರಮ
೬-೨-೬೮/೨೪/೧, ಅಮರಖೇಡ್ ಲೇಔಟ್,
ಮಾಣಿಕಪ್ರಭು ಗುಡಿಯ ರಸ್ತೆ,
ರಾ ಯ ಚೂ ರು - ೫೮೪ ೧೦೧

**ಪ್ರತಿಗಳು : ೧೦೦೦**

**ಬೆಲೆ : ರೂ. ೪೦/-**

ಮುದ್ರಕರು :

**ಪ್ರಲ್ಹಾದರಾವ್ ಹೆಚ್. ಕುಲಕರ್ಣಿ**
ಮೆ॥ ಲೀಲಾ ಪ್ರಿಂಟರ್ಸ್
ಮಳಿಗೆ ನಂ. ೨೪, ಎಂ.ಆರ್.ವಿ. ಎಸ್ಟೇಟ್,
ಜೈನ್ ಮಂದಿರ ರಸ್ತೆ, ರಾಯಚೂರು-೫೮೪ ೧೦೧

**Sri Vidyamanya Tirtha Swamiji**
Sri Bhandarakeri & Palimar Mutt
Car Street, UDUPI-576 101
Phone : 243402 (Udupi)
55368 (Palimar)

**ಶ್ರೀ ವಿದ್ಯಾಮಾನ್ಯತೀರ್ಥ ಸ್ವಾಮೀಜಿ**
ಶ್ರೀ ಭಂಡಾರಕೇರಿ ಮತ್ತು ಪಲಿಮಾರು ಮಠ
ರಥಬೀದಿ, ಉಡುಪಿ-576 101
ದೂರವಾಣಿ : 243402 (ಉಡುಪಿ)
55368(ಪಲಿಮಾರು)

# ಆಶೀರ್ವಚನ

ಭಗವದ್ಭಕ್ತರಾದ ಶ್ರೀಯುತ ಉಪ್ಲಿ ಮಧ್ವರಾಯರು ಮಾಡಿದ ದೊಡ್ಡ ಕೆಲಸ ಶ್ರೀ ವಿಜಯದಾಸರ ಸುಳಾದಿಗಳು, ತಾರತಮ್ಯ ಸುಳಾದಿ ಮತ್ತು ಶ್ರೀಗುರು ವಿಜಯದಾಸರ ಸುಳಾದಿಗಳು ಹಾಗೂ ಶ್ರೀ ಗೋಪಾಲ ದಾಸರ ಸುಳಾದಿ ಮತ್ತು ಪದಗಳ ಪ್ರಕಾಶನ ಮಾಡಿ ಪ್ರಸ್ತುತ ಶ್ರೀ ವಿಜಯ ದಾಸರ ತೀರ್ಥ ಕ್ಷೇತ್ರ ಮಹಿಮಾ ಸುಳಾದಿ ಮತ್ತು ಪದಗಳನ್ನು ಪ್ರಕಾಶಿಸುತ್ತ ಲಿದ್ದಾರೆ. ಇದು ಶ್ರೀ ಹರಿ ವಾಯುಗಳಿಗೆ ಅತ್ಯಂತ ಪ್ರೀತಿಕರವಾಗಿದೆ. ಇವರ ಉತ್ತಮ ಕೃತಿಗಳನ್ನು ಭಗವದ್ಭಕ್ತರೆಲ್ಲರು ಪಠಣ ಮಾಡಿ ಧನ್ಯರಾಗಬೇಕು. ಇಂಥಾ ಮಹಾಸೇವೆಯನ್ನು ಇನ್ನೂ ವಿಶೇಷವಾಗಿ ಮಾಡಿ ಶ್ರೀ ಉಪ್ಪಲಿ ಮಧ್ವರಾಯರು ಶ್ರೀ ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗಲೆಂದ ನಾವು ಅಪೇಕ್ಷಿಸುತ್ತೇವೆ.

ಇಂತಿ,

**ಶ್ರೀ ವಿದ್ಯಾಮಾನ್ಯ ತೀರ್ಥ ಸ್ವಾಮೀಜಿ**
ಶ್ರೀ ಭಂಡಾರಕೇರಿ ಮತ್ತು ಪಲಿಮಾರು ಮಠ

॥ ಶ್ರೀ ॥

# ಮುನ್ನುಡಿ

—: ಸುಳಾದಿ ಸುಮಸೌರಭದ ಬಗ್ಗೆ ನಾಲ್ಕು ಮಾತುಗಳು :—

ತೀರ್ಥಕ್ಷೇತ್ರವೆಂಬ ಈ ಎರಡು ಶಬ್ದಗಳನ್ನು ಸ್ವಲ್ಪ ವಿವೇಚಿಸೋಣ.

1) ತೀರ್ಥ :- ತೀರ್ಥಶಬ್ದೋ ಮುಖ್ಯತಃ ಪಾವನೇಷು ವರ್ತತೇ ।

ನಾನ್ಯತ್ರ ತೀರ್ಥವೆಂದರೇ ಪವಿತ್ರವೆಂದರ್ಥ, ಪವಿತ್ರ ವಸ್ತುಗಳಲ್ಲಿ ಅತ್ಯಂತ ಪವಿತ್ರವಾದ ವಸ್ತು ಶ್ರೀಮನ್ನಾರಾಯಣ, ಇವನು ಅನೇಕ ರೂಪಗಳಿಂದ ಜಡಉದಕಗಳಲ್ಲಿ ನೆಲಿಸಿ ನಿಯಾಮಕನೆನಿಸಿರುವನು. ಇವನೊಡನೆ ಆಯಾ ತೀರ್ಥಗಳಲ್ಲಿ ಬೇರೆ ಬೇರೆ ದೇವತೆಗಳು ಸಹಾ ಇದ್ದು ತೀರ್ಥಾಭಿಮಾನಿಗಳೆನಿಸುವರು. ತೀರ್ಥರೂಪಿ ಶ್ರೀಹರಿಯ ಸನ್ನಿಧಾನದಿಂದ ದೇವತಗಳು ಸ್ವಯಂ ಪವಿತ್ರರಾಗಿ ತಮ್ಮಿಂದ ಅಭಿಮನ್ಯವಾದ ಜಡಉದಕಗಳಿಗೂ ಪಾವಿತ್ರತೆಯನ್ನು ಉಂಟು ಮಾಡಿರುವರು. ಅತಯೇವ ಕೂಪ, ವಾಪಿ, ತಟಾಕ, ನದ್ಯಾದಿ ಸಮಸ್ತ ಉದಕ ಸಮುದಾಯಗಳು ಪವಿತ್ರಗೈಯುವ ಶಕ್ತಿ ಉಳ್ಳವುಗಳಾಗಿ ತೀರ್ಥಶಬ್ಬದ ಸಾರ್ಥಕವನ್ನು ಪಡೆದಿರುವವು. "ನದೀನಾಂ ಸಾಗರೋ ಗತಿಃ" ಎನ್ನುವಂತೆ ನದನದಿಗಳ ಜಲವು ಸಮುದ್ರವನ್ನು ಸೇರುವವು. ನದಿಗಳು ಕೇವಲ ತೀರ್ಥಗಳೆನಿಸಿದರೆ "ಸಮುದ್ರವು ತೀರ್ಥರಾಜ" ಎಂದು ಕರೆಸುವುದು. ಅತಯೇವ ಸಮುದ್ರವನ್ನು ಕಂಡೊಡನೆಯೇ ದೊಡ್ಡವರು "ನಮೋತೀರ್ಥರಾಜಾಯಾ" ಎಂದು ಭಕ್ತಿಯಿಂದ ನಮನ ಗೈಯುವರು. ವರುಣಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಮನ್ನಾರಾ-ಯಣನೇ ನಿಜವಾದ ತೀರ್ಥರಾಜನಲ್ಲವೇ.

ಶ್ರೀಶನ ಸಂಬಂಧದಿಂದಲೇ ಪಾವಿತ್ರ್ಯ ಅದು ಇಲ್ಲದಿರೆ ಪಾವಿತ್ರ್ಯಕ್ಕೆ ಎಡೆ ಎಲ್ಲಿ ? ಗಂಗೆಯು ಅತ್ಯಂತ ಪವಿತ್ರಳು, ನಿಜ. ಕಾರಣ ತ್ರಿವಿಕ್ರಮರೂಪಿ ಭಗವಂತನ ಪಾದೋದ್ಭವವೇಯಾದ ಪ್ರಯುಕ್ತ. ಭಗವತ್ಸಂಬಂಧಭಾವ, ಭಗವನ್ಮಯರಾದ ದೇವತೆಗಳ ಸಂಬಂಧದಿಂದ ಜಡೋದಕಗಳಿಗೂ ಸಹ ಪಾವನಗೈಯುವ ಶಕ್ತಿ ಉಂಟೆಂದು ನಿಶ್ಚಯುವಾಯಿತು. ಭಗವನ್ನಿಷ್ಟಾತ್ಮಕ ಈ ಶಕ್ತಿಯ ಅರಿವನ್ನು ಸಾಧಕರಿಗೆ ತಿಳಿಸಲೋಸುಗ ಶ್ರೀಮನ್ ಜಗನ್ನಾಥ ದಾಸವರ್ಯರು.

ಅಂಗುಟಾಗ್ರದಿ ಜನಿಸಿ ದಮರ । ತರಂಗಿಣಿಯು ಲೋಕತ್ರಯ ಗಳಘ ।

ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ ॥ ಇಂಗಡಲ ಮಗಳೊಡೆಯ ನಂಗೋ । ಪಾಂಗಗಳಲಿಪ್ಪಮಲನಂತ ಸು । ಮಂಗಳ ಪ್ರದನಾಮ ಪಾವನ ಮಾಳ್ಪುದೇನರಿದು ॥ ಎನ್ನುತ್ತಾರೆ ಶ್ರೀ ಮದ್ಹರಿಕಥಾಮೃತಸಾರದಲ್ಲಿ.

ತೀರ್ಥಶಬ್ದಕ್ಕೆ ಆಧ್ಯಾತ್ಮ ಅರ್ಥ ಉಂಟು. ''ನಹಿಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೇ'' ಎಂಬ ಪ್ರಮಾಣರೀತ್ಯಾ ನಿಜವಾದ ಪಾವಿತ್ರ್ಯ ಜ್ಞಾನ ದಿಂದಲೇ, ಜ್ಞಾನಕ್ಕೆ ಸರಿಯಾದ ಪವಿತ್ರವಸ್ತು ಮತ್ತೊಂದಿಲ್ಲ, ಜ್ಞಾನದಿಂದಲೆ ಅಂತಃಕರಣ ಶುದ್ಧಿ. ಜಡತೀರ್ಥಗಳಲ್ಲಿ ಕೇವಲ (ಅನುಸಂಧಾನವಿಲ್ಲದ) ಸ್ನಾನಾ ದಿಗಳಿಂದ ಬಾಹ್ಯಮಲದಿಂದಷ್ಟೇ ಶುದ್ಧಿ. ''ಗಂಗೆ ಮಿಂದರೆ ಮಲವು ಹಿಂಗಿ ತಲ್ಲದೆ ರಂಗನೊಲಿಯನೋ ಭಕುತರ ಸಂಗದೊರೆಯದೇ'' ಎನ್ನುತ್ತದೆ ವಿಜಯವಾಣಿ. ಜ್ಞಾನ ಪರಸ್ಪರ ಭಗವಂತನನ್ನು ಪ್ರೀತಿಸುವುದೇ ಭಕ್ತಿ. ಇದು ಉಳ್ಳವರೇ ಭಕ್ತರು. ಭಕ್ತರ ಸಂಗ, ಅವರ ಸೇವೆ ಮತ್ತು ಅಂತಃಕರಣ ಪರ ಸ್ಪರ ಅವರ ಉಪದೇಶದಿಂದಲೇ ಜ್ಞಾನಪ್ರಾಪ್ತಿ. ಈ ನಿಟ್ಟಿನಲ್ಲಿ ತತ್ವಜ್ಞಾನವೆ ನಿಜವಾದ ತೀರ್ಥವೆಂದಾಯಿತು. ಇಂತಹ ಜ್ಞಾನಾರ್ಜನೆಗಾಗಿ ಜ್ಞಾನಿಗಳನ್ನು ಹುಡಿಕಿಕೊಂಡು ಹೋಗುವುದು ನಿಜವಾದ 'ತೀರ್ಥಾಟನ'. ಧನವ ಸಂಪಾದಿ ಸುವ ಪರ್ದಾವಣಿಕರಂದದಿ ಕೋವಿದರ ಸದನಗಳಲ್ಲಿ ಸಂಚರಿಸು ಸಚ್ಛಾಸ್ತ್ರ ಶ್ರವಣಗೋಸುಗವ, ಕೋವಿದರ ಸದನ ಹೆಗ್ಗದವ ಕಾಯುದೇ ಫಲವಿದು ಬಾಳ್ದುದಕೇ – ಎನ್ನುತ್ತಾರೆ ರಂಗವಲಿದಾಸರು.

ಇಲ್ಲಿ ಹೆಗ್ಗದ–ಹಿರಿದಾದದಕರ ಅರ್ಥಾತ್ ದೊಡ್ಡಬಾಗಿಲು – ಊರಬಾಗಿಲು ದೇಹಾಖ್ಯವಾರಿಗೆ ದೊಡ್ಡ ಬಾಗಿಲ ಸ್ಥಾನದಲ್ಲಿರುವುದು ಬಾಯಿ (ದುಃಖ) ಇದು ವಾಗೀಂದ್ರಯಕ್ಕೆ ಆಶ್ರಯ. ರಸನೇಂದ್ರಿಯಕ್ಕೂ ಹೌದು. ದೊಡ್ಡವರ ವಾಗೀಂದ್ರಯದಿಂದ ಹೊರಹೊಮ್ಮುವುದೇ ವಾಗ್ಗಂಗೆ. ಅರ್ಥಾತ್ ಜ್ಞಾನಿ ಗಳು ಗೈಯುವ ಜ್ಞಾನೋಪದೇಶದಿಂದಲೇ ನೈಜ ಪಾವಿತ್ರ್ಯತೆಯ ಪ್ರಾಪ್ತಿ ಎಂದಾಯಿತು. ಪೂರ್ವೋಕ್ತ ವಿವೇಚನೆಯ ಹಿನ್ನೆಲೆಯಿಂದ ತೀರ್ಥಗಳನ್ನು ಸೇವಿಸುವುದು ಸಜ್ಜನರ ಸಾಧನೆಯ ಒಂದು ಅವಿಭಾಜ್ಯ ಅಂಗವೆಂದು ನಿಶ್ಚಯ ವಾಗುವುದು.

2) ಕ್ಷೇತ್ರ : ಕೃಷಿಗೆ ಯೋಗ್ಯವಾದ ಭೂಮಿಯನ್ನು ಕ್ಷೇತ್ರವೆನ್ನುವರು. ಕೃಷಿಗಾರನು ಭೂಮಿಯಿಂದ ಯೋಗ್ಯ ಮತ್ತು ಸಮೃದ್ಧಬೆಳೆಯನ್ನು ಬೆಳೆಯ ಬೇಕಾದರೆ, ಭೂಮಿಯನ್ನು ಶುದ್ಧಗೊಳಿಸಬೇಕು. ಈ ಕಾರ್ಯ ನಡೆಯದೇ ಬೀಜವನ್ನು ಬಿತ್ತಿದರೆ ವ್ಯರ್ಥವಾಗುವುದು. ಇದರಂತೆ ನಮ್ಮ ಮನವೆಂಬ ಭೂಮಿಯು ಶುದ್ಧವಾಗಬೇಕು. 'ಇದಂ ಶರೀರಂ ಕೌಂತೇಯ ಕ್ಷೇತ್ರ ಮಿತ್ಯ ಭಿಧಿಯತೇ' ಎನುತ್ತದೆ. ಶ್ರೀಕೃಷ್ಣವಾಣಿ. ಬೃಹದಾತ್ಮಕ ಬ್ರಹ್ಮಾಂಡವು ಭಗ

ವಂತನ ಒಂದು ಶರೀರ. ಅಂತೆಯೇ ಪಿಂಡಾಂಡಗಳು ಸಹ ಶ್ರೀಹರಿಗೆ ಶರೀರಗಳೇ, ಅಂದರೆ ಶ್ರೀಹರಿಗೆ ಅಧಿಷ್ಠಾನಗಳು ಎಂದರ್ಥ. ಶ್ರೀಶನು ತನ್ನ ಪರಿವಾರದವರಾದ ತತ್ವದೇವತೆಗಳೊಡನೆ ಇಲ್ಲಿ ವಾಸಿಸುತ್ತಿರುವುದರಿಂದ ಇವು ಭಗವಂತನ ಕ್ಷೇತ್ರಗಳಾದವು. ಭಗವಂತನ ವ್ಯಾಪ್ತಿ ಎಲ್ಲೆಡೆಯೂ ತುಂಬಿದೆ. ವಿಶೇಷತಃ ವಿಭೂತ್ಯಾತ್ಮಕ ಅವನ ವಿಶೇಷ ಸನ್ನಿಧಾನವು ಸ್ಥಳವಿಶೇಷಗಳಲ್ಲಿ ಉಂಟು. ಈ ಅರ್ಥದಲ್ಲಿ ಭಗವಂತನ ವಿಶೇಷ ಸನ್ನಿಧಾನದಿಂದ ಯುಕ್ತವಾದ ಪ್ರದೇಶಗಳನ್ನು ಕ್ಷೇತ್ರವೆಂದು ಕರೆಯುವರು. ಪುಣ್ಯಪ್ರದವಾದ ಪ್ರಯುಕ್ತ ಇಂತಹ ಕ್ಷೇತ್ರಗಳನ್ನೇ ಪುಣ್ಯಕ್ಷೇತ್ರಗಳೆನ್ನುವರು. ಭಗವಂತನು ಕ್ಷೇತ್ರಜ್ಞ ಜೀವ ಕ್ಷೇತ್ರಸ್ಥ ಪಿಂಡಾಂಡದೊಳಗಿನ ಕ್ಷೇತ್ರಜ್ಞನನ್ನು ಕಾಣಲು, ಬ್ರಹ್ಮಾಂಡದೊಳಗಿನ ವಿಶೇಷತಃ ಭೂಮಂಡಲದೊಳಗಿನ, ಕರ್ಮಭೂಮಿ ಎನಿಸಿರುವ ಭರತಖಂಡದ ಭಗವಂತನ ವಿಶೇಷ ಸನ್ನಿಧಾನೋಪೇತ ಕ್ಷೇತ್ರಗಳನ್ನು ಸಂದರ್ಶಿಸುವುದು. ಸಾಧನೆಯ ಮತ್ತೊಂದು ಅವಿಭಾಜ್ಯಅಂಗ ವೆಂದಾಯಿತು. ಪೂರ್ವೋಕ್ತ ತೀರ್ಥಕ್ಷೇತ್ರಾರ್ಥ ವಿವೇಚನೆಯಿಂದ ತೀರ್ಥಕ್ಷೇತ್ರಗಳನ್ನು ಸೇವಿಸುವುದು ಸಾಧಕರಿಗೆ ಅತ್ಯಂತ ಅವಶ್ಯಕವೆಂದಾಯಿತು. ಈ ಹಿನ್ನೆಲೆಯಿಂದ ಜ್ಞಾನಿಗಳು ತೀರ್ಥ ಕ್ಷೇತ್ರಯಾತ್ರೆಯನ್ನು ಕೈಗೊಂಡಿರುವರು. ಅಲ್ಲಿಯ ಮಹಿಮೆಗಳನ್ನು ಕುರಿತು ಮುಕ್ತ ಕಂಠದಿಂದ ಹಾಡಿರುವರು. ಈ ದಿಸೆಯಲ್ಲಿ ಅಪರೋಕ್ಷಿಕೃತ ಶ್ರೀಶರಾದ ಹರಿದಾಸರಿಂದ ರಚಿಸಲ್ಪಟ್ಟ ತೀರ್ಥಕ್ಷೇತ್ರ ಮಹಿಮಾ ಸುಳಾದಿಗಳು ಈ ನಿಟ್ಟಿನಲ್ಲಿ ಸಾಧಕರಿಗೆ ಸಾಕಷ್ಟು ಬೆಳಕನ್ನು ಬೀರುತ್ತಿರುವವು.

''ತೀರ್ಥ ಕುರ್ವಂತಿ ತೀರ್ಥಾನಿ'' ಇತ್ಯಾದಿ ವಾಕ್ಯಗಳಿಂದ ತೀರ್ಥಪಾದನಾದ ಶ್ರೀಹರಿಯನ್ನು ಹೃದಯಾರವಿಂದದಲ್ಲಿ ಧರಿಸಿ ಸ್ವಯಂ ಪೂತಾತ್ಮರೆನಿಸಿದ ಭಾಗವತರು ತೀರ್ಥಗಳನ್ನು ಇನ್ನಷ್ಟು ಪವಿತ್ರಗೈಯುವುದಕ್ಕಾಗಿ ತೀರ್ಥಗಳಲ್ಲಿ ಮೀಯುವರು. ಇಂತಹ ತೀರ್ಥ ಕ್ಷೇತ್ರಗಳಲ್ಲಿ ಮೀಯಲು ಬಂದ ಸಜ್ಜನರ ಮೇಲೆ ಅನುಗ್ರಹ ಮಾಡುವುದಕ್ಕಾಗಿಯೂ ಜ್ಞಾನಿಗಳು ಸಂಚಾರಗೈಯುವರು 'ಅನುಗ್ರಹಾಯೇಹ ಚರಂತಿ ನೂನಂ । ಭೂತಾನಿ ಭವ್ಯಾನಿ ಜನಾರ್ಧನಸ್ಯ ಎನ್ನುತ್ತದೆ ಶ್ರೀಮದ್ಭಾಗವತ.

ನಿನ್ನ ದರುಶನಕೆ ಬಂದವನಲ್ಲವೋ । ನಿನ್ನ ಭಕುತರ ನೋಡಲಿ ಬಂದೆ । ಎನ್ನುತದೆ ದಾಸವಾಣಿ. ಈ ವಾಕ್ಯಗಳ ಭಾವವನ್ನು ಗಮನಿಸಿದಾಗ ಜ್ಞಾನಿಗಳ ಸಹ ತೀರ್ಥ ಕ್ಷೇತ್ರಾಟನೆ ಗೈಯುವುದುಂಟು ಎಂದು ಸಿದ್ಧವಾಯಿತು. ಆತಯೇವ ಅನೇಕ ಪುರಾಣಾದಿಗಳಲ್ಲಿ ತೀರ್ಥಕ್ಷೇತ್ರ ಮಹಿಮೆ ತಥಾ ಅವುಗಳನ್ನು ಸೇವಿಸಿದ ಮಹಾತ್ಮರ ಚರಿತ್ರೆಗಳು ಹೃದಯಂಗಮವಾಗಿ ಚಿತ್ರಿಸಲ್ಪಟ್ಟಿವೆ.

ಆಚಾರ್ಯ ಮಧ್ವರು ಸಹ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದ ದಾಖಲೆ ಉಂಟು, ಅವರ ಪರಂಪರೆಯಲ್ಲೇ ಪ್ರಾಪ್ತರಾದ ಲಾತವ್ಯ ಚಕ್ರವರ್ತಿ ಭಾವಿಸಮೀರ ಶ್ರೀ ಮಧ್ವಾದಿರಾಜ ಗುರುಸಾರ್ವಭೌಮರು ತಾವು ಸಂದರ್ಶಿಸಿದ ತೀರ್ಥಕ್ಷೇತ್ರಗಳ ದಾಖಲೆಯನ್ನು ಗ್ರಂಥರೂಪದಿಂದ ಸಾಧಕರಿಗೆ ಕೈಗನ್ನಡಿಯಾಗಿ ನೀಡಿರುವರು. ಮುಂದಿನ ಪೀಳಿಗೆಗೆ ಈ ದಿಸೆಯಲ್ಲಿ ಶ್ರೇಷ್ಠ ಮಾರ್ಗದರ್ಶನ ನೀಡಿದ ಘನತೆ ಈ ಮಹಾತ್ಮರಿಗೇ ಸಲ್ಲುವುದು. ಅದುವೇ 'ತೀರ್ಥಪ್ರಬಂಧ ಎನ್ನುವ ಪ್ರಬಂಧ ರಾಜ.

ಹರಿದಾಸ ಕುಲಪಿತಾಮಹರೆನಿಸಿದ ಶ್ರೀ ಪುರಂದರ ದಾಸರು ತೀರ್ಥಕ್ಷೇತ್ರಮಹಿಮೆಯನ್ನು ಕುರಿತು ಸಾಕಷ್ಟು ಕೃತಿಗಳನ್ನು ರಚಿಸಿರುವರೆಂಬ ದಾಖಲೆ ಅವರ ಒಂದು ಕೃತಿಯಿಂದಲೇ ತಿಳಿದು ಬರುತ್ತದೆ. ಲಕ್ಷೋಪಲಕ್ಷ ಕೃತಿಗಳನ್ನು ರಚಿಸಿದ ಕೀರ್ತಿ ಇವರಿಗೇ ಮೀಸಲು ! ಪೂರ್ವೋಕ್ತ ವಾಸ್ತವಿಕತೆಯನ್ನು ಪರಿಕ್ಷಿಸಿದಾಗ ಜ್ಞಾನಿಗಳು ತೀರ್ಥಕ್ಷೇತ್ರಗಳನ್ನು ಸೇವಿಸುವುದರ ಬಗ್ಗೆ ಅದೆಷ್ಟು ಆದರ ಮತ್ತು ಮಹತ್ವವನ್ನು ತೋರಿದ್ದರು ಎಂಬುದು ಜಿಜ್ಞಾಸುಗಳಿಗೆ ಅರ್ಥವಾಗದೆ ಇರದು. ಅಂತಃಕರಣವು ಹದಗೊಂಡು ಜ್ಞಾನಿಗಳ ಉಪದೇಶಸ್ವಪಡೆಯಲು ಯೋಗ್ಯ, ಅದೃಷ್ಟ ಉತ್ಪಾದನೆಗೆ ತೀರ್ಥಕ್ಷೇತ್ರಗಳ ಸಂದರ್ಶನಾದಿಗಳು ಅತ್ಯಂತ ಅವಶ್ಯಕವೆಂಬುದು ಸಾಧಕರಾದವರಿಗ ಮನಗಾಣದೆ ಇರದು. ಶ್ರೀ ಪುರಂದರ ದಾಸರಿಂದ ಇಷ್ಟು ಅಪಾರ ಸಾಹಿತ್ಯ ರಚಿಸಲ್ಪಟ್ಟಿದ್ದರೂ ಅದು ನಮ್ಮ ಪಾಲಿಗೆ ಇಲ್ಲದಾಗಿದೆ. ಶ್ರೀ ಪುರಂದರ ದಾಸರ ನಂತರ ಭೃಗುಋಷಿಗಳೇ ಶ್ರೀ ವಿಜಯ ದಾಸರಾಗಿ ಅವತರಿಸಿ ಭರತಖಂಡದಾದ್ಯಂತ ಸಂಚರಿಸಿ ತೀರ್ಥಗಳಲ್ಲಿ ಮಿಂದು ಕ್ಷೇತ್ರಮೂರ್ತಿಯನ್ನು ಸಂದರ್ಶಿಸಿ ಅವುಗಳಲ್ಲಿ ಭಗವಂತನ ವಿಶೇಷ ಸಾನಿಧ್ಯವನ್ನು ಉಂಟುಮಾಡಿರುವರು. ಪೂರ್ವದಲ್ಲಿ ಇವರು 'ಮಧ್ವಪತಿ' ಎಂಬ ಹೆಸರಿನಲ್ಲಿ ಶ್ರೀ ಪುರಂದರದಾಸರ ಮಕ್ಕಳಾಗಿದ್ದು, ಅವರ ಅಂತಃಕರಣ ಪರಸ್ಪರ ಉಪದೇಶಕ್ಕೆ ಪಾತ್ರರಾಗಿ ತಮ್ಮಲ್ಲಿ ಜ್ಞಾನದ ನಿಧಿಯನ್ನು ಸ್ಥಾಪಿಸಿಕೊಂಡರು. ಆ ನಿಧಿ ಈಗ ಪದ, ಪದ್ಯ ಸುಳಾದ್ಯುಗಾಭೋಗ ರೂಪದಿಂದ ಹೊರಹೊಮ್ಮಿರುವುದು. ಅಲ್ಪಾಧಿಕಾರಿಗಳಾದ ನಮ್ಮ ಯೋಗ್ಯತೆಗೆ ತಕ್ಕಂತೆ ಅವರ ಅಪಾರ ಸಾಹಿತ್ಯ ಸಿಂಧುವಿನಲ್ಲಿ ನಮಗೆ ದೊರೆತದ್ದು ಬಿಂದು ಮಾತ್ರ. ಉಪಲಬ್ಧವಾದ ಅವರ ಸಾಹಿತ್ಯವನ್ನು ಅತ್ಯಂತ ಶ್ರಮದಿಂದ ಸಂಗ್ರಹಿಸಿ, ವಿಂಗಡಿಸಿ ಭಿನ್ನ ಭಿನ್ನ ಶೀರ್ಷಿಕೆಗಳಲ್ಲಿ ಗ್ರಂಥಗಳ ಮೂಲಕ ಸಜ್ಜನರಿಗೆ ಶ್ರೇಷ್ಠ ಕೊಡುಗೆಯನ್ನು ನೀಡಿದ ಘನತೆ ಶ್ರೀಯುತ ಶ್ರೀಸುಂದರ ವಿಠಲದಾಸರಿಗೆ (ಗೊರೇಬಾಳ ಹನುಮಂತರಾಯರಿಗೆ) ಸಲ್ಲುವುದು. ಕಾಲಗತಿಯಿಂದ ಪೂರ್ವೋಕ್ತ ಹರಿದಾಸ ಸಾಹಿತ್ಯವನ್ನೊಳಗೊಂಡ ಗ್ರಂಥಗಳು ಉಪಲಬ್ಧವಿಲ್ಲದಂತಾಗಿ ಸಜ್ಜನರು ಮನಮರುಗುತ್ತಿರುವುದನ್ನು

ಗ್ರಹಿಸಿದ ಭಕ್ತರೊಬ್ಬರು ಅವರೆಲ್ಲರ, ವಿಶ್ವಾಸಿಕರ ಪ್ರಾರ್ಥನೆಗೆ ಓಗೊಟ್ಟು ಒಂದೊಂದಾಗಿ ಗ್ರಂಥಗಳನ್ನು ಮುದ್ರಿಸಿ ಪ್ರಚುರ ಪಡಿಸುತ್ತಿರುವರು. ಇಂತಹ ಗ್ರಂಥ ಮಾಲೆಯಲ್ಲಿ ಅರಳಿದ ಪ್ರಾಕೃತ ಪುಷ್ಪವೇ ಶ್ರೀ ವಿಜಯದಾಸರ 'ತೀರ್ಥಕ್ಷೇತ್ರ ಮಹಿಮಾ ಸುಳಾದಿಗಳು'. ಇಂತಹ ಉತ್ತಮ ಕಾರ್ಯವನ್ನು ಗೈಯುತ್ತಿರುವ ಹಿರಿಯರೂ, ಪೂಜ್ಯರೂ ಆದ ಶ್ರೀಮಾನ್ ಉಪ್ಲಿ ಗುರು ಮಧ್ವರಾಯರು. ಎಲೆಮರೆಯ ಕಾಯಿಯಂತೆ ಗುಪ್ತರಾಗಿರುವರು. ''ಮೂಕ ಬಧಿರರಂತಿಪ್ಪರೋ ನೋಳ್ಪ ಜನಕೆ । ಕಾಕುಯುಕುತಿಗಳನ್ನವರು ತಾರರೋ ಮನಕೆ'' ಎಂಬ ದಾಸೋಕ್ತಿಯಂತೆ, ಏನೂ ಗೊತ್ತಿಲ್ಲದ ಮುಗ್ಧತೆ ಅವರ ಮುಖದಲ್ಲಿ ಎದ್ದು ಕಾಣುತ್ತಿರುವುದು ಅವರನ್ನು ಕಂಡವರಿಗೆ ಅನುಭವ ವಾಗದೇ ಇರದು. ಇಂತಹ ಜ್ಞಾನಯಜ್ಞದಲ್ಲಿ ಪೂಜ್ಯರಿಗೆ ನೆರವಾಗುತ್ತಿರುವ ಸಜ್ಜನರನ್ನು ಈ ಸಂದರ್ಭದಲ್ಲಿ ಸ್ಮರಿಸದೇ ಇರುವುದು ಒಂದು ಅಪರಾಧ. ಅಂತಹ ಅಪರಾಧವೆನ್ನಿಂದಾಗಬಾರದೆಂದು ಅವರ ಹೆಸರನ್ನು ಮಾತ್ರ ಇಲ್ಲಿ ಉದಾಹರಿಸುವೆ. ಶ್ರೀ ನರಸಿಂಗರಾವ ಕುಲ್ಕರ್ಣಿ ಮುಂಡರಗಿ, ಶ್ರೀ ಕಾಶೀ ಹನುಮಂತದಾಸರು, ಶ್ರೀ ಶ್ರೀನಿವಾಸಾಚಾರ್ಯ ಕಟ್ಟಿ ಊಟಿ, ಶ್ರೀ A. ಗುರುರಾಜರಾಯರು, ಶ್ರೀ ಪ್ರಲ್ಹಾದರಾವ ಬಳ್ಳಾರಿ, ಶ್ರೀ ವಿಜಯೀಂದ್ರ ಬಳ್ಳಾರಿ, ಶ್ರೀ ದದ್ದಲ ನರಸಿಂಗರಾಯರು, ಶ್ರೀ ರಮೇಶರಾವ ಬೆಂಗಳೂರು ಶ್ರೀ ಸುಧೀಂದ್ರರಾಯರು ಬೆಂಗಳೂರು, ಶ್ರೀ ರಾಘವೇಂದ್ರಾಚಾರ ಕೌಲಗಿ, ಶ್ರೀ ಸೋಮಶೇಖರರಾವ ಬೆಂಗಳೂರು.

ಹರಿದಾಸರೊಡೆಯಾ ಶ್ರೀ ವಿಠಲನೂ ಪೂರ್ವೋಕ್ತ ಮಹನೀಯರಿಗೂ ಮತ್ತು ಪ್ರತ್ಯಕ್ಷ ಪರೋಕ್ಷದಿಂದ ಸಹಾಯಗೈದ ಇಲ್ಲಿ ಉದಹರಿಸಲಾಗದ ಇತರ ಅನೇಕ ಸಜ್ಜನರಿಗೆ ಇತೋಪ್ಯತೀಶಯಶಕ್ತಿ ಇಂತಹ ಸತ್ಕಾರ್ಯಗಳನ್ನು ಮಾಡುವುದರಲ್ಲಿ ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ. ಅಖಿಲಿನಂತೆ ನನಗೂ ಈ ನಾಲ್ಕು ವಾಕ್ಯಗಳನ್ನೇ ಹರಿದಾಸರ ಹೃದಯಾಂತರ್ಯಾಮಿ ಶ್ರೀಶನ ಅಡಿದಾವರೆಗಳಲ್ಲಿ ಅರ್ಪಿಸುವ ಸುಯೋಗ ಒದಗಿಸಿದುದಕ್ಕೆ ನಾನು ಪೂಜ್ಯ ಶ್ರೀ ಗುರುಮಧ್ವರಾಯರಿಗೆ ಅತ್ಯಂತ ಋಣಿಯಾಗಿರುವೆ. ಕೃತಜ್ಞತಾ ಪರಸ್ಪರ ಭಕ್ತಿಯುತ ನಮನಗಳನ್ನು ಅವರ ಹೃದಯಾಂತರ್ವರ್ತಿಗೆ ಅರ್ಪಿಸುವೆನು. ಶ್ರೀ ವಿಜಯಾ ವಿಠಲಾ ಭಿನ್ನ ಶ್ರೀ ಗುರು ವಿಜಯವಿಠಲನು ಸಕಲ ಯೋಗ್ಯ ಚೇತನರಿಗೆ ಪ್ರೇರಿಸಿ ಈ ಗ್ರಂಥದ ಪ್ರಯೋಜನವನ್ನು ಸಾಧಿಸಿ ಕೊಳ್ಳುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸಿ ಸಮಸ್ತ ಸೋತ್ತಮ ಗುರು ಬಿಂಬಾ ಭಿನ್ನ ಅಸ್ಮದ್ ಬಿಂಬ ಮೂರ್ತಿ ಶ್ರೀ ಹರಿನಾರಾಯಣ ವಿಠಲನ

ಪ್ರಚುರಿಸಲ್ಪಟ್ಟು ಸಜ್ಜನರ ಕೈ ತಲುಪಿದೆ. ಇವರು ಸಂಗ್ರಹಿಸಿದ ಮತ್ತು ಸ್ವಯಂ ಸಂಪಾದಿಸಿದ ಅಪಾರ ಅಧ್ಯಾತ್ಮ ನಿಧಿಯನ್ನು ಭದ್ರಗೊಳಿಸಲೋಸುಗ ಮತ್ತು ಮುಂದಿನ ಪೀಳಿಗೆಗಾಗಿ ಉಪಯೋಗಕ್ಕೊದಗುವ ಉದ್ದೇಶದಿಂದಲೂ ಮತ್ತು ಇವರು ಒಂದೆಡೆ ಕುಳಿತು ಇತರೋಪ್ಕತಿಶಯ ಶ್ರೀಹರಿ ಗುರುಸೇವೆ ಗೈಯಲು ಅನುಕೂಲಿಸುವಂತೆ ಇವರ ವಿಶ್ವಾಸಿಗಳೇನಕರು ಸೇರಿ ರಾಯಚೂರಿನಲ್ಲಿ ಒಂಡು ಆಶ್ರಯವನ್ನೇ ನಿರ್ಮಿಸಿ ಇಪರಿಗೆ ನೀಡಿದ್ದು ಕಂಡರೇ ಸಜ್ಜನ ಸಮಾಜಕ್ಕೆ ಇವರ ಬಗ್ಗೆ ಇರುವ ಆಪಾರ ಗೌರವ ಮತ್ತು ಪೂಜ್ಯ ಭಾವನೆಯನ್ನು ಎತ್ತಿ ತೋರಿ–ಸುತ್ತದೆ. ಅನೇಕ ಅಡೆತಡೆಗಳ ಮಧ್ಯೆಯೂ ಈ ಆಶ್ರಮ ಪೂರ್ಣವಾಗಿ ಭಗವದ್ಭಕ್ತರಿಗೆ ಎಲ್ಲವೂ ಸುಸಾಧ್ಯ ಎಂಬ ಸತ್ಯದ ಅರಿವನ್ನು ತೋರಿಸಿದೆ. ಈ ಆಶ್ರಮವು ಇವರ ಅಂತರಂಗದಲ್ಲಿ ಬೆಳಗುವ ಗುರುಚಂದ್ರಮರ ಹೆಸರಿನಲ್ಲಿ ಅರ್ಥಾತ್ "ಗುರುವಿಜಯದಾಸ ಹೆಸರಿನಲ್ಲಿ"ಗುರುವಿಜಯದಾಸಾಶ್ರಮವೆಂದು ಶೋಭಿಸುತ್ತದೆ. ಬಹುಶಃ ಸಜ್ಜನರೊಬ್ಬರಿಗೆ ಸತ್ಕಾರ್ಯಕ್ಕಾಗಿ ಈ ರೀತಿ ಆಶ್ರಮವೊಂದು ನಿರ್ಮಿಸಿದ್ದು ಇದೇ ಮೊದಲ ಪ್ರಯತ್ನ ಅಥವಾ ಇದೇ ಮೊದಲ ಸಲ ಎನ್ನಬಹುದು. ದಿನೇ ದಿನೇ ಅಲ್ಲಿ ಅಭಿವೃದ್ಧಿ ಕಾರ್ಯಗಳು ಸಾಗುತ್ತಾ ಇವೆ.

ಇವರಿಗೆ ಮಾತು ಬೇಡ, ಊಟತಿಂಡಿಗಳಲ್ಲಿ ಅನಾಸಕ್ತಿ ಕೀರ್ತಿಗೌರವಗಳಿಗೆ ಇವರು ಬಹುದೂರ, ಇವರಲ್ಲಿ ಬೇಡವೆಂದರೂ ಎದ್ದು ತೋರುವ ಈ ಸದ್ಗುಣಗಳು ದೊಡ್ಡವರ ಅಮೃತಶ್ರಾವಿ ನುಡಿಯನ್ನು ಥಟ್ಟನೆ ಸ್ಮರಣೆಗೆ ತಾರದೇ ಇರದು.

' ಜನರ ಮನ್ನಣೆ ದೃಷ್ಟಿ ಕನಸಿಲಾದರೂ ಬೇಡ'
ಮನಸು ಸದಾ ನಿನ್ನಲ್ಲಿ ನೆಲಸಿ ಇರಲೋ ಸ್ವಾಮಿ ಎನ್ನುತ್ತಾರೆ.

ಶ್ರೀ ಜಯೇಶ ವಿಠಲ ದಾಸರು.

ಸದಾ ಏನಾದರೂ ಸುಳಾದಿಗಳನ್ನು ಪಠಿಸುವುದೇ ಅವರ ಜೀವನದ ಉಸಿರಾಗಿದೆ. ಅಹರ್ನಿಷೆಗಳಲ್ಲಿ ಭಗವಂತನ ಸ್ಮರಣೆಯೇ ಭಕ್ತರು ಬಲವಂತದಿಂದ ಕೊಟ್ಟ ಹಣ ಅದು ಇವರದ್ದಲ್ಲ. ಕೂಡಲೇ ಯಾವುದೇ ಒಂದು ಸತ್ಕಾರ್ಯಕ್ಕೆ ವಿನಿಯೋಗಿಸಬೇಕು. ಇದು ಅವರ ಎತ್ತರವನ್ನು ಅಳೆಯುವ ಅಳತೆ ಗೋಲು ಮಾತ್ರ. ಎತ್ತರವನ್ನಷ್ಟೋ ಇಲ್ಲಿ ಕಾಣಿಸುವುದು ದುರ್ಲಭ. ಇಂತಹ ಪುಣ್ಯಾತ್ಮರನ್ನು ಪಡೆದಿರುವ, ಗುರುತಿಸಿರುವ ಸಮಾಜವದು ಧನ್ಯ. ಇವರ ಹೆಚ್ಚು

ಹೆಚ್ಚು ಪ್ರಯೋಜನವನ್ನು ಸುಸಮಾಜ ದಿನೇದಿನೇ ಪಡೆಯುವಂತೆ ಶ್ರೀಗುರು ವಿಠಲನು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.


ಇಂತಿ ಸಜ್ಜನ ಪದುಮಾಧಾರಕ,
( ಹರಿನಾರಾಯಣದಾಸ )
**H. ಹನುಮಂತರಾಯರು**
ಮ. ನಂ. 3-4-138/1,
" ಶಾಂತಿಧಾಮ "
ಬರಕತ್‌ಪುರ ಮಂಗಳಾ ಅಪಾರ್ಟ್‌ಮೆಂಟ್ಸ್.
ಹೈದರಾಬಾದ -500 028.




॥ ಶ್ರೀ ಗುರುವಿಜಯವಿಠಲ ಪ್ರಸನ್ನ ॥

# ಅ ನಿ ಸಿ ಕೆ

ಶ್ರೀ ಹರಿದಾಸ ಸಾಹಿತ್ಯಕ್ಕೆ ಅಳಿಲು ಸೇವೆಯನು ಸಲ್ಲಿಸುವ ಘನ ಉದ್ದೇಶದಿಂದಲೇ ರೂಪುಗೊಂಡಿರುವ ''ಶ್ರೀ ಗುರುವಿಜಯದಾಸಾಶ್ರಮ'' ಅನೇಕ ಭಗವದ್ಭಕ್ತರ ಕನಸಿನ ಸಾಕಾರವಾಗಿದೆ.

ಇದೀಗ '' ಶ್ರೀ ಗುರುವಿಜಯದಾಸಾಶ್ರಮದ '' ವತಿಯಿಂದ ಪೂಜ್ಯರಾದ ಶ್ರೀ ಗುರುಮಧ್ವರಾವ ಉಪ್ಪಲಿ ತಾತಾ ಇವರ ಸತತ ಪರಿಶ್ರಮದಿಂದ, ಮಹದಪರೋಕ್ಷೀಕೃತ ಶ್ರೀಶರಾರ ಶ್ರೀ ವಿಜಯದಾಸ ವರೇಣ್ಯರಿಂದ ವಿರಚಿತವಾದ 'ಕ್ಷೇತ್ರಮಹಿಮಾ ಸುಳಾದಿಗಳು' ಎಂಬ ಸಂಗ್ರಹದ ಹೊತ್ತಿಗೆ ಚೊಚ್ಚಲ ಕಾಣಿಕೆಯಾಗಿ ಹೊರಹೊಮ್ಮಿದೆ.

ದಾಸಸಾಹಿತ್ಯ ಸಾರಸ್ವತ ಸಮುದ್ರದಲ್ಲಿ ಶಫರನಂತಿರುವ ಪೂಜ್ಯ ಶ್ರೀ ಗುರುಮಧ್ವರಾಯ ತಾತನವರ ವ್ಯಕ್ತಿತ್ವದ ಪರಿಚಯ ಮಾಡಿಕೊಡು–ವುದು, ಜಗತ್ತಿಗೆ ಸೂರ್ಯನ ಪರಿಚಯ ಮಾಡಿಸಿದಂತಾಗುತ್ತದೆ. ಆದ್ದರಿಂದೆ ಅಲ್ಪಜ್ಞಳಾದ ನಾನು ಶ್ರೀ ತಾತಾ ಅವರ ಬಗ್ಗೆ ಹೆಚ್ಚಿಗೆ ಹೇಳಲಶಕ್ತಳು.

ಶ್ರೀ ದಾಸಾಶ್ರಮದ ವತಿಯಿಂದ ಶ್ರೀ ತಾತಾ ಅವರ ಪರಿಶ್ರಮದಿಂದ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಇಂತಹ ಮಂಗಳ ಗ್ರಂಥಗಳು ಆದಷ್ಟು ಲೋಪರಹಿತವಾಗಿ ಮುದ್ರಣಗೊಂಡು, ಹೊರಹೊಮ್ಮಲಿ ಎಂದು ಶ್ರೀಹರಿ ವಾಯು ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಈ ದಿಶೆಯಲ್ಲಿ ಸ್ವಾರ್ಥರಹಿತವಾಗಿ ದಾಸಸಾಹಿತ್ಯಕ್ಕಾಗಿ ಜೀವನವನ್ನು ಮುಡುಪಾಗಿಟ್ಟ ಶ್ರೀ ತಾತಾ ಇವರಿಗ ಶ್ರೀ ಮಾಧವ ಹಾಗೂ ಶ್ರೀ ಮಧ್ವರು ಆಯುರಾರೋಗ್ಯ ಭಾಗ್ಯವನ್ನು ಕೊಡಲಿ ಮತ್ತು ಅವರುಗಳ ಸಾಧನೆ ಹಾಗು ಪರಿಶ್ರಮ ನಮಗೆ ದಾರಿದೀಪವಾಗಲಿ ಎಂದು ನನ್ನ ಮನೆಯ ಕುಲಸ್ವಾಮಿಯಾದ ಶ್ರೀ ಕಾರ್ಪರ ಲಕ್ಷ್ಮೀನರಸಿಂಹ ಸ್ವಾಮಿಯಲ್ಲಿ ಪ್ರಾರ್ಥಿಸುತ್ತೇನೆ.

ನನ್ನ ಅಂತಃಕರಣ ಶುದ್ಧಿಗಾಗಿ. ಶ್ರೀ ತಾತಾ ಅವರ ಆದೇಶಾನುಸಾರವಾಗಿ ಈ ಮೇಲಿನ ನನ್ನ ಅನಿಸಿಕೆಗಳನ್ನು ಯಥಾಮತಿ ನಿರೂಪಿಸಿದ್ದೇನೆ. ಶ್ರೀ ಮಧ್ವೇಶಾರ್ಪಣಮಸ್ತು ಇಂತಿ,

ಬುಧಜನ ಪದಧೂಳಿ

**ಕು. ರಾಘಮ್ಮ ಕುಲ್ಕರ್ಣಿ**

ಮುಂಡರಗಿ,

॥ ಶ್ರೀ ಉಲಿದೆಕೋಡು ಲಕ್ಷ್ಮೀ ಚಿಂತಲರಾಯ ಪ್ರಸೀದತು ॥

# ಸಂಗ್ರಾಹಕರ ಅರಿಕೆ

ಶ್ರೀ ಹರಿವಾಯು ಗುರುಗಳ ಪ್ರೇರಣಾನುಸಾರ ಶ್ರೀ ಮೊದಲಕಲ್ ಶೇಷದಾಸರ ಶತಮಾನ ಆರಾಧನೋತ್ಸವ ಸಮಿತಿಯ ಪ್ರೋತ್ಸಾಹದಿಂದ 1985ರಲ್ಲಿ ಶ್ರೀ ಶೇಷದಾಸರ ಸುಳಾದಿಗಳ ಸಂಗ್ರಹವನ್ನು ಮಾಡಿ ಸಮಿತಿಯ ದ್ವಾರಾ ಮತ್ತು ಶ್ರೀ ತಿರುಮಲ ತಿರುಪತಿ ದೇವಸ್ಥಾನ ಗ್ರಂಥ ಪ್ರಕಾಶನ ವಿಭಾಗದ ಸಹಕಾರದಿಂದ ಗ್ರಂಥ ರೂಪದಲ್ಲಿ ಪ್ರಕಾಶಿಸಲಾಯಿತು. ಈ ಗ್ರಂಥ ಪ್ರಕಾಶನವೇ ಹರಿದಾಸ ಕೃತಿಗಳ ಪ್ರಕಾಶನಕ್ಕೆ ನಾಂದಿಯಾಗಿ, ಮುಂದಿನ ಗ್ರಂಥಗಳು ಹೊರಬರಲು ಕಾರಣವಾಯಿತು. ಇದುವರೆಗೆ ಪ್ರಕಾಶಿತಗ್ರಂಥಗಳು

1. ಶ್ರೀ ಶೇಷದಾಸರ ಸುಳಾದಿಗಳು
2. ಶ್ರೀ ಗೋಪಾಲದಾಸರ ಸುಳಾದಿಗಳು
3. ಪಂಚಪ್ರಮೇಯ
4. ಸೃಷ್ಟಿಪ್ರಕರಣ ಸುಳಾದಿಗಳು
5. ತಾರತಮ್ಯ ಸುಳಾದಿಗಳು

ಮತ್ತು ಚಿಕ್ಕ ಹೊತ್ತಿಗೆಗಳು ಶ್ರೀಗುರು ಶ್ರೀಶವಿಠ್ಠಲ ಸುಳಾದಿಗಳು, ಶ್ರೀ ಶೇಷದಾಸರ ವಾರದ ಸುಳಾದಿಗಳ ಮತ್ತು ದಾಸರಾಯರ ಅಷ್ಟಕ ಇತ್ಯಾದಿಗಳು. ಪ್ರಸ್ತುತ ಶ್ರೀ ವಿಜಯದಾಸರ ಕ್ಷೇತ್ರ ಮಹಿಮಾ ಸುಳಾದಿಗಳ ಶುದ್ಧ ಪ್ರತಿ ಸಿದ್ಧವಾಗಿ ಬಹಳ ದಿವಸವಾದರೂ ಪ್ರಕಾಶನಕ್ಕೆ ಅನುಕೂಲ ವಾತಾವರಣ ತೋರದೆ ತಡವಾದ ಸಂದರ್ಭದಲ್ಲಿ ಶ್ರೀ ಕಾಶಿ ಹನುಮಂತ ದಾಸರು, ಶ್ರೀ ಕಟ್ಟಿ ಶ್ರೀನಿವಾಸದಾಸರು, ಶ್ರೀ M K. ಪ್ರಲ್ಹಾದರಾಯರು ಶ್ರೀ M. K. ವಿಜಯೀಂದ್ರರಾಯರು, ಶ್ರೀ ಕೌಲಿಗಿ ರಾಘಣ್ಣನವರು ಶ್ರೀ A. ಗುರುರಾಜರಾಯರು, ಶ್ರೀ ರಮೇಶರಾಯರು, ಶ್ರೀ ಸುಧೀಂದ್ರನವರು, ಶ್ರೀ ದದ್ದಲ ನರಸಿಂಗರಾಯರು ಶ್ರೀ ಸೋಮಶೇಖರವರು

ಇವರು ಅನೇಕ ಭಕ್ತರ ಸಹಕಾರದಿಂದ ಸಂಪೂರ್ಣ ಪ್ರಕಾಶನದ ಕೆಲಸವನ್ನು ಶ್ರೀ ವಿಜಯದಾಸರ ಸೇವಾರೂಪವಾಗಿ ವಹಿಸಿಕೊಂಡದ್ದರಿಂದ ಈ ಗ್ರಂಥ ಹೊರಬರಲು ಸಾಧ್ಯವಾಯಿತು.

ಸುಳಾದಿ, ಪದ ಹಾಗೂ ದಾಸರಾಯರ ಕೃತಿಗಳ ಪ್ರಕಾಶನಕ್ಕೆ ತನುಮನ ಧನಗಳಿಂದ ಆತ್ಮಾರ್ಪಣ ಮಾಡಿದ ಪ್ರಾತಃ ಸ್ಮರಣೀಯರಾದ ದಿ॥ಗೊರೆಬಾಳ ಹನುಮಂತರಾವ, ಲಿಂಗಸೂಗೂರು ಇವರನ್ನು ಸ್ಮರಿಸಿ ಅವರು ಸಂಗ್ರಹಿಸಿ ಪ್ರಕಾಶಿಸಿದ ಸುಳಾದಿಗಳು ಮತ್ತು ಶ್ರೀ ಗೋಪಾಲದಾಸರ ವಂಶೀಕರಾದ ದಿ. ಶ್ರೀ ವೆಂಕೋಬದಾಸರು ಗದ್ವಾಲ ಮೊದಲಾದ ಭಗವದ್ಭಕ್ತರಲ್ಲಿ ದೊರೆತ ಹಸ್ತಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಓದುಗರಲ್ಲಿ ಅರ್ಪಿಸುತ್ತಿದ್ದೇನೆ ಈ ಗ್ರಂಥದಲ್ಲಿ 103 ಸುಳಾದಿಗಳು ಮತ್ತು 53 ಪದಗಳು ಸಂಗ್ರಹಿಸಲಾಗಿದೆ. ಗದ್ವಾಲ ಸಂಸ್ಥಾನದ ಒಂದು ಹಳ್ಳಿಯಾದ ಉಪ್ಪಲಿ ಗ್ರಾಮದಲ್ಲಿ ಕರ್ಣಿಕ ವೃತ್ತಿಯಿಂದ ತಲುಗು ಭಾಷೆ ಸಂಪರ್ಕ ಹೆಚ್ಚಾಗಿದ್ದುದರಿಂದ ಕನ್ನಡ ಭಾಷಾ ಜ್ಞಾನ ಸರಿಯಾಗಿ ಆಗದೆ ಈ ಗ್ರಂಥದಲ್ಲಿ ಲೋಪದೋಷಗಳೇನಾದರು ತೋರಿದಲ್ಲಿ ಓದುಗರು ಸಹೃದಯರಾಗಿ ಕ್ಷಮಿಸಿ ತಿಳಿಸಿದಲ್ಲಿ ಮುಂದಿನ ಗ್ರಂಥ ಗಳಲ್ಲಿ ತಿದ್ದಿಕೊಳ್ಳುವೆನು. ಮುಖ್ಯ ಪ್ರೋತ್ಸಾಹಕರ್ತರು ಮುಂಡರಗಿ ಕುಲಕರ್ಣಿ ನರಸಿಂಗರಾಯರು ಪ್ರೆಸ್ ಮಾಲಕರಾದ ಹೆಚ್. ಪ್ರಲ್ಹಾದರಾವ ಕುಲಕರ್ಣಿ ಮೆ॥ ಲೀಲಾ ಪ್ರಿಂಟರ್ಸ್, ಮಳಿಗೆ ನಂ. 24, ಎಂ. ಆರ್. ವಿ. ಎಸ್ಟೇಟ್, ರಾಯಚೂರು–584 101 ಈ ಗ್ರಂಥ ಮುದ್ರಣದ ಸದವಕಾಶ ದ್ವಾರಾ ಶ್ರೀ ವಿಜಯದಾಸರ ಸೇವೆಗೆ ಅವಕಾಶ ಕೊಡಲು ತಾವಾಗಿ ಮುಂದೆ ಬಂದು ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟಿದ್ದಾರೆ. ಇವರಿಗೆ ಶ್ರೀ ದಾಸರಾಯರ ಪೂರ್ಣ ಆಶೀರ್ವಾದವಾಗಲೆಂದು ಹಾರೈಸುವೆ.

ಗ್ರಂಥ ಹೊರಬರಲು ಸಹಕರಿಸಿದ ಸರ್ವರಿಗೂ ಶ್ರೀ ಶೇಷದಾಸರ ಉಪಾಸ್ಯ ಮೂರುತಿ ಶ್ರೀ ಚಿಂತರವೇಲಿ ಪ್ರಾಣದೇವರ ಹೃದ್ವನಜದಲ್ಲಿ ಮಿನುಗುವ ಶ್ರೀ ವೆಂಕಟೇಶನ ಕೃಪೆ ಆಗಲೆಂದು ಹಾರೈಸುವೆನು.

ದಾಸರದಾಸ — ಗುರುಮಧ್ವ ಉಪ್ಲಿ

* * * *

# ಪಾರ್ಥಸಾರಥಿ

ಯತ್ರ ಯೋಗೀಶ್ವರಃ ಕೃಷ್ಣಾ । ಯತ್ರ ಪಾರ್ಥೋ ಧನುರ್ಧರಃ ॥
ತತ್ರ ಶ್ರೀ ರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥



ಶ್ರೀ ಮೊದಲುಕಲ್ಲು ಶೇಷದಾಸರು ಧರೂರು ಗ್ರಾಮದಲ್ಲಿ
ಪ್ರತಿಷ್ಠಾ ಮಾಡಿದ ಉಪಾಸ್ಯ ಮೂರುತಿ
ಶ್ರೀ ಪಾರ್ಥಸಾರಥಿ ಪ್ರತಿಷ್ಠಾ ಪಾರ್ಥಿವ ಸಂ॥ ಚೈತ್ರ ಶು॥ ೧ ಯುಗಾದಿ

# ಪ್ರಾಣದೇವರು

'' ಹರಿಯ ವಿಹಾರಕ್ಕೆ ಆವಾಸನೆನಿಸುವೀ
ಗುರು ವಿಜಯವಿಠಲನ ಸುಪ್ರೀತ ಘನದೂತ ''



ಶ್ರೀ ವ್ಯಾಸರಾಯರ ಪ್ರತಿಷ್ಠಿತ ಚಿಂತರವೇಲಿ ಪ್ರಾಣದೇವರು
ಶ್ರೀ ಶೇಷದಾಸರ ಉಪಾಸ್ಯ ಮೂರುತಿ

# ಶೇಷದಾಸರು

ಶ್ರೀಶಾಂಘ್ರೀ ಸೇವಕಂ ನಿತ್ಯಂ । ಭೂಸುರಾಗ್ರ ಕುಲೋದ್ಭವಂ ॥
ವಾಸಮಾದಿ ಶಿಲಾಕ್ಷೇತಂ । ಶ್ರೀ ಶೇಷದಾಸ ಗುರುಂಭಜೇ ॥



ಶ್ರೀ ಗುರು ವಿಜಯವಿಠ್ಠಲರು ಇವರೇ

**ಮೊದಲಕಲ್ಲು ಶ್ರೀ ಶ್ರೀ ಶೇಷದಾಸರು**

ಜನನ 1817 ಯಾತ್ರಾ 1885

# ಶ್ರೀ ರಘುದಾಂತತೀರ್ಥರು



ಶ್ರೀಮದಕ್ಷೋಭ್ಯ ತೀರ್ಥಮಠ

**ಶ್ರೀ ರಘುದಾಂತ ತೀರ್ಥಯತಿಗಳು**

( ಶ್ರೀ ಶೇಷದಾಸರ ಆಪ್ತಕರ್ತರು )

# ಶ್ರೀ ಶೇಷದಾಸವರ್ಯರ ಅಷ್ಟಕ

ಶ್ಲೋಕ : ಸೀತಾಪತಿಂಹರಿಮಜ್ಞಾತಂ ಪ್ರಣಮ್ಯಮತಿ
ಹೇತುಂ ಸುಖಾಯ ಪವನಾ । ಜ್ಞಾತಂ ಬಲಾಯ
ಪುರುಹೂತಾವತಾರ ಜಯತೀರ್ಥಂಧನಾರ್ಥ ಮನಿಶಂ ॥
ಪೋತಂ ಸುಧೀಂದ್ರಗುರುಜಾತಂ ತಥೈವ ಮಮಶಾತಂಚ
ಜೀವಿತ ಕೃತೇ ।
ಖ್ಯಾತಸ್ಸರೀತಿ ಮನು ನೀತಾಂಕರೋಮಿ ಕೃತು
ಮೇತಾಂತು ಶೇಷ ಸುಗುರೋಃ ॥ ೧ ॥

ಶ್ಲೋಕ : ಶ್ರೀ ಪಾರ್ಥಸೂತ ಪದ ಜಾಪಾಖ್ಯಮುಕ್ತಿಪದ ಸೋಪಾನ
ಮಾರ್ಗಗ(ದ)ಗುರುಃ । ಪಾಪಾತ್ಮನಾಂ ನಿಖಿಲ
ತಾಪಾಪನೋದ ನತಯಾಪಾರ ಸೌಖ್ಯ ಮಧುಹತ॥ ಭೂಪಾಲ
ವರ್ಯಕೃತ ಕೋಪಾದ್ಗದಾ ಚಿದಾಯ ಮಾಪಾಶುಚಿಪ್ರ
ಶಿಖರಂ। ಗೋಪಾಲಭಕ್ತ ವಿಜಯೋಪಾಭಿದಸ್ಯ ಮಹಿಮಾಪೂರ
ಮಜ್ಜನ ಮಥಾತ್ ॥ ೨ ॥

ಶ್ಲೋಕ : ದಾಸಾರ್ಯವರ್ಯ ಕರುಣಾಸಾಗರೋಪ ಗತ
ಮೇಶಾಂಘ್ರಿ ಪದ್ಮ ಮಹಿಮಾ । ಲೇಶಾಮೃತಾಪ್ತಮತಿ
ಕೋಶಃಶಚೇಶ ಇವ ಭಾಸಾಭಿ ನಂದ್ಯವಿಬುಧಾನ್ ।
ದೇಶಾನ ಟನ್ಖಿಲ ಕುಲೇಶಾನ್ವಿಜಿತ್ಯಾರಭ ಸಾಸಾಧ್ಯ ಭಕ್ತಿ
ಭರಿತೋ । ವ್ಯಾಸಾರ್ಯಪನ್ನವ ಪಲಾಶೇನ ನಾಮ
ಪತಗೇಶೋ ಯಥಾ ಮುರಹರಂ ॥ ೩ ॥

ಶ್ಲೋಕ : ಕ್ರೂರಾರಿ ದುಷ್ಟಮತ ವಾರಾಶಿ ಕುಂಭಸುತ ಮಾರಾಧ್ಯ
ತದ್ವರಯುತಃ । ಸಾರಂ ಸುಚಿಂತ್ರವಲಿ ಮಾರಾದುಪೇತ್ಯ
ಕಪಿ ವೀರಂ ಭಜನ್ ಕತಿಪಯಾನ್ ॥ ವಾರಾನುವಾಸ
ಗುರು ರಾರಾಧಯನ್ ಸುಜನ ವಾರಂ ಸುಭೋಜ್ಯ ಧನತೋ।
ದೂರಾತ್ಪಿಶಾಚ್ಯ ಪರಿವಾರಃ ಪ್ರಯಾತಿ ಖಲು ಘೋರೂಪಿ
ಯತ್ಸ್ಮರಣತಃ ॥ ೪ ॥

ಶ್ಲೋಕ : ಜಂಭಾರಿ ದಂತಿವರದಂಭಾ ಪಹಾರಿ ಕುಚ ಕುಂಭಾಂಚಿ
ತೇಂದ್ವವರಜಾ । ಸಂಭೋಗ ಕಾಲಪರಿ ರಂಭಾಪ್ತ ಕುಂಕುಮ
ಪರಾಂ ಭೋರುಹಾಂಕರು ಚರಂ । ಅಂಭೋಜನಾಭಮತಿ

ಸಂಭಾವನಾಯ ಜಗದಂಬಾಕುಮಾರ ವಚನಾತ್ ।
ಕುಂಭೀಂದ್ರ ಕೃತ್ತಿಧರ ಶಂಭೋರ್ಗ್ಗಿರಿಂ ಜನಕದಂಬಾವೃತೋ
ಗುರುರಗಾತ್ ॥ ೫ ॥

ಶ್ಲೋಕ : ರಾಮಂ ರಘೋಃ ಕುಲ ಲಲಾಮಂ ನಿಶಾಟತತಿ ಭೀಮಂ
ಬಲಾಹಕ ಇವ । ಶ್ಯಾಮಂ ಸತಾಂಸಕಲ ಕಾಮಪ್ರದಂತ
ಮಿಹ ಸೋಮಂಸುರೋಡುನಿಕರೇ ॥ ಸೌಮ್ಯಂಬುಜಾಕ್ಷಮಿತಿ
ವಾಮಂ ಯಥಾಸುಜನಧಾಮಾಸ್ತುವನ್ ಭಗವತಃ । ಪ್ರೇಮಂ
ಪ್ರಸಾದ್ಯ ಬಲಸೀಮಂಸಮೀರಣಮಧೋ ಮಾಕಳತ್ರಮಭಜತ
॥ ೬ ॥

ಶ್ಲೋಕ : ಗಂಗಾಂಗದಾಚಿದಘ ಸಂಘಾಪಹಾರಕ, ವಿಹಂಗಾಧಿಪ
ಧ್ವಜವರೋ । ತ್ಸಂಗಾವಧಿಪ್ಲುತ ತರಂಗಾನ್‌ದದರ್ಶ
ಭವಭಂಗಾಂ ಜನೈಃ ಪರಿವೃತಃ ॥ ತುಂಗೋಪವಾಸ ವೃತ
ರಂಗಾಧಿ ಪಸ್ಸುಜನಸಂಗೀ ಹರೇರ್ಗುಣಗಣಾನ್ । ಸಂಗೀತ
ತೋಕಥಯದಂಗೀಚಕಾರ ಮೃದುಲಾಂಗೀ ರಮಾಸುತ ಇತಿ॥೭॥

ಶ್ಲೋಕ : ಶ್ರೀ ರಾಘವೇಂದ್ರ ಗುರು ಮಾರಾಧ್ಯ ಮಾಯಿದಿತಿ
ಜಾರಿಂತದೀಯ ಕರುಣಾ।ಧಾರೋನು ಭೂಯ ಸುಖಸಾಂ ಕಿರೀಟೆ
ರಥಭಾರಂ ವಹಂತ ಮದಧತ॥ಶ್ರೀರಾಮವತ್‌ಖಲ ಕುಠಾರೋಪ
ನೀತಿಕೃತಿ ಮಾರಾದ್ವಿದಾಯ ಸುಯಶೋ।ದೂರಂಗತಂ ಭುವಿ
ದಧಾರಾಥನಾಕಿ ಪರಿವಾರಸ್ತುತೋ ಯಮಭವತ್ ॥ ೮ ॥

ಶ್ಲೋಕ : ಶ್ರೀಶೇಷವರ್ಯ ಹರಿದಾಸಾಗ್ರಣೇಶ್ಚರಿತ ಮಾಂಶಂಶಿತಂ
ಯಲಮಳೇ।ವಾಸಸ್ಯವಿಠಲ ಕೃತೀಶಸ್ಯಪೂರ್ಣ ಕರುಣಾಶಾವತಾಹ
ಹರಃ॥ಶ್ರೀ ಶ್ರೀನಿವಾಸ ಸುಕವೀಶೇನ ಪಾಠಮನು ಮೀಶೊದದಾತಿ
ಸುಸುತಂ । ವಾಸೋಧನಂಚ ಸುಯಶಃ ಶೋಭಿನಂ ಸುಖ
ಮಶೇಷಃ ಶೃತೆ ಸ್ಮೃತಿಗತಂ ॥ ೯ ॥

ಇತಿ ಶ್ರೀ ರಘುದಾಂತ ತೀರ್ಥ ವಿರಚಿತ
ಶ್ರೀ ಶೇಷದಾಸರ ಅಷ್ಟಕ ಸಂಪೂರ್ಣಂ

॥ ಶ್ರೀ ಕೃಷ್ಣಾರ್ಪಣಮಸ್ತು ॥

# ಅನುಕ್ರಮಣಿಕೆ

ವಿಜಯದಾಸರ ತೀರ್ಥಕ್ಷೇತ್ರಮಹಿಮಾ ಸುಳಾದಿಗಳು



ಅಥ ದಕ್ಷಿಣ ಪ್ರಬಂಧ

ಅಥ ಪಶ್ಚಿಮ ಪ್ರಬಂಧ



ಅಥ ಉತ್ತರ ಪ್ರಬಂಧ

॥ ಶ್ರೀ ಲಕ್ಷ್ಮೀ ನರಸಿಂಹ ಪ್ರಸೀದ ॥

# ತೀರ್ಥಕ್ಷೇತ್ರ ಸ್ತೋತ್ರ ಪದಗಳು

( ಶ್ರೀ ಜಗನ್ನಾಥ ವಿಠಲ )

## ತೀರ್ಥಕ್ಷೇತ್ರ ಅನುಕ್ರಮಣಿಕೆ ಪದ

೧ ಪದ–ರಾಗ–ಭೂಪಾಳಿ ॥ ವಾರ್ಧಿಕ ॥ ಝಂಪೆತಾಳ

ಸ್ಮರಿಸಿ ತೀರ್ಥಕ್ಷೇತ್ರ ಸಜ್ಜನರು ನಿರುತದಲಿ ।
ಅರುಣೋದಯದಲೆದ್ದು ಭಕ್ತಿಪೂರ್ವಕವಾಗಿ ।
ಕರುಣತ್ರಯದಿ ಮಾಳ್ವ ಪಾಪರಾಶಿಗಳ ಪರಿಹರಿಸಿ ಸಂತೈಸುವ ।

ಭಾಗೀರಥಿ ಸರಸ್ವತಿ ಯಮುನ ವಾರುಣಾ ।
ಶ್ರೀ ಗೋದ ಫಲ್ಗುಣೀ ಶೋಣ ಭದ್ರಾ ನರ್ಮ ।
ದಾ ಗಂಡಿಕಿ ಭೀಮರಥಿ ತುಂಗಭದ್ರಾ ಪ್ರಯಾಗ ತ್ರಿವೇಣಿ ಹೇಮಾ ।
ವೇಗವತಿ ಗಾಯತ್ರಿ ಕೌಸಿಕಿ ಮಣಿಕರಣಿ ।
ಕಾ ಗೌತುಮಿ ವಿಯದ್ಗಂಗಾ ಕುಮುದ್ವತಿ ।
ಕಾಗಿನೀ ನೇತ್ರವತಿ ವೈತ್ರವತಿ ಹೈಮವತಿ ಸಿಂಧು ಪಾಪೌಘನಾಶೀ ।

ಸರಯು ಜಯಮಂಗಳಾ ಜಮದಗ್ನಿ ವರತಾಮ್ರ ।
ಪರಣಿ ಯೋಗಾನಂದ ಕೃತುಮಾಲ ಕುಹಮಹೇ ।
ಶ್ವರಿ ಶಂಖಚಕ್ರವತಿ ಭವನಾಶಿನೀ ಗದಾಧರ ಮೇನಕ ಸುನಾಸೀ ।
ಗರುಡ ಮದಿರಾ ಮರುದ್ವತಿ ಸ್ವರ್ಣಮುಖರಿ ವಂ ।
ಝರ ತಾಪನೀಕಾ ಸೌಪರಣಿ ದಕ್ಷಿಣೋ ।
ತ್ತರ ಪಿನಾಕಿನಿ ಕಪಿಲ ಸೀತಾಳಕಾನಂದ ತುರಗಮುಖ ಪ್ರಣವಸಿದ್ಧ ॥೨॥

ಕಾವೇರಿ ಸಿಂಧು ಮಾಲಿನೀ ಗಾರ್ಗಿಣೀ ಹರಿ ।
ದ್ರಾವತಿ ಇಂದ್ರಾಣಿ ಕುಂದ ಕುಂಡಿನಿ ಶೈವ ।
ದೇವತತಿ ಪಾತಾಳಗಂಗಾ ಪುನಃ ಪುನಃ ನೀರಾಕುಮಾರಧಾರೀ ।
ಧಾವಿತ್ರಿ ಧಾನ್ಯಮಾಲಾ ಪುಷ್ಪವತಿ ಲೋಕ ।
ಪಾವನೀ ಮೌಳಿಮೌಕ್ತೀ ಸಿಂಧು ಧರ್ಮಾಕು ।
ಶಾವರ್ತಿನೀ ಚಕ್ರತೀರ್ಥ ಭಯನಾಶಿನೀ ವರದಾಮ ಉಪಹಾರಿ ॥೩॥

ಸ್ವಾಮಿ ಪುಷ್ಕರಣಿ ಮಾನಸಚಂದ್ರ ಪುಷ್ಕರಣಿ ।
ಭೂಮಂಡಲದೊಳುತ್ತಮತ್ರಿ ಪುಷ್ಕರಣಿ ।

ಶ್ರೀಮಧ್ವನಿತ್ಯ ಪುಷ್ಕರಣಿ ಸೀತಾಪದ್ಮಸರ ಸೀತಾಚಂದ್ರಭಾಗತೀರ್ಥ ।
ವಾಮನ ಮಯೂರ ಪಂಪಾ ಸರೋವರ ಪುಣ್ಯ ।
ಧಾಮ ವ್ಯಾಸಸಮುದ್ರ ಧವಳಗಂಗಾ ಸುಸಾ ।
ಧ್ಯಾಮೃತ ಸಮುದ್ರಗುರು ಭೀಮಸೇನತಟಾಕ ರೋಮಹರ್ಷಣ ತೀರ್ಥವ॥೪॥

ದ್ವಾರಕಾನಗರ ಸಾಲಗ್ರಾಮ ಬದರಿ ನರ ।
ನಾರಾಯಣಾಶ್ರಮ ಜಗನ್ನಾಥ ಶ್ರೀಮುಷ್ಟ ।
ಮೇರು ಪಾರಿಶ್ವಮಂದರ ಸುತ್ಪಾರಿಶ್ವ ಮೈನಾಕ ಕೈಲಾಸ ಕಾಂಚಿ ।
ಶ್ರೀ ರಂಗನಾಥ ನೈಮಿಷದ್ವೈತ ಚಂಪಕಾ ।
ಆರಣ್ಯ ಕಾಶಿ ಪೊಂಪಾವಂತಿಕಾಪುರೀ ।
ಗೌರಿ ಮಯೂರ ಸಿಂಹಾದ್ರಿ ಪಾಟಲಿ ಹರಿದ್ವಾರ ಛಾಯಾಪಿಪ್ಪಲ ।

ಕೇದಾರ ಸಗರ ಮಂದಾಕಿನೀ ಕುಸುಮಾವತಿ ।
ಸ್ವಾದಿ ಸುಬ್ರಹ್ಮಣ್ಯ ಕೋಟೀಶ್ವರಾ ನಂದಿ ।
ಪಾದ ಕ್ರೌಂಚಾದ್ರಿ ಮಹನಂದಿ ಶಂಕರನಾಮ ನಾರಾಯಣಾನಿವರ್ತಿ ।
ವೇದಪಾದ ಯಯಾತಗಿರಿ ಕಾಳಹಸ್ತಿ ಕಾ ।
ಮೋದಕೀ ಪಾಂಡುರಂಗಕ್ಷೇತ್ರ ಶ್ರೀ ವಿಷ್ಣು ।
ಪಾದ ಗಯಾ ಕಾಳೀಶ್ವರೀ ಹಸ್ತಿನಾಪುರಿ ಪಾಟಲೀ ಮಂತ್ರಾಲಯ ॥೬॥

ಗೋವರ್ಧನಾದ್ರಿ ಮೈನಾಕ ಮಂದರ ಮಲಯ ।
ಕೈವಲ್ಯನಾಥ ಕಾಶ್ಮೀರ ಜಾಂಬವತಿ ವೃಂ ।
ದಾವನ ಧನುಕೋಟಿ ವಾತಪುರಿ ಕನ್ಯಾಕುಮಾರಿ ಶ್ವೇತಾದ್ರಿ ವೃಷಭಾ ।
ಶ್ರೀ ವಿರುಪಾಕ್ಷ ಕುಂದರನಂದಪುರಿ ಮಾಯ ।
ಶ್ರೀ ವತ್ಸ ಗಂಧಮಾದನ ಚಿತ್ರಕೂಟ ದ್ವಾ ।
ರಾವತೀ ವ್ಯಾಘ್ರಪುರಿ ಗೋಕುಲಾ ನಾರಾಚ ಸೌಭರೀ ಆದಿನಾಥ ॥೭॥

ಈ ಮಹೀ ಮಂಡಲದೊಳಿಪ್ಪ ತೀರ್ಥಕ್ಷೇತ್ರ ।
ನಾಮಗಳ ಕಾಲತ್ರಯಗಳಲ್ಲಿ ಸ್ಮರಿಸುತಿಹ ।
ಧೀಮಂತರಾಗಾಮಿ ಸಂಚಿತಾಘೌಘ ಪರಿಹರಿಸಿದಾ ನಂತರದಲಿ ।
ಸೋಮಾರ್ಕರುಳ್ಳನಕ ವಿವಿಧ ಭೋಗಗಳ ಸು ।
ತಾಮ್ರ ಲೋಕದೊಳುಣಿಸಿ ಕರುಣಾಳು ಪ್ರಾಂತಕೆ । ಸ್ವ
ಧಾಮ ಐದಿಸಿ ಮುಕ್ತರನ ಮಾಳ್ಪನಹುದೆಂದು ಸೂತ ಶೌನಕಗೆಪೇಳ್ದ ॥

ಈ ಭರತಖಂಡದೊಳಗುಳ್ಳ ತೀರ್ಥಕ್ಷೇತ್ರ ।
ವೈಭವಾಬ್ಜ ಭವಾಂಡ ಪೌರಾಣದೊಳಗೆ ಹರಿ ।
ನಾಭಿ ಸಂಭವಗೆ ಪೇಳ್ದ ನಾರದನಿಗಿನಿತೆಂದು ಪರಮ ಕಾರುಣ್ಯದಿಂದ ॥
ಸ್ತ್ರೀ ಬಾಲ ಗೋ ವಿಪ್ರ ಮಾತಾಪಿತೃಗಳ ಧನ ।
ಲೋಭದಿಂದಲಿ ಕೊಂದ ಪಾತಕವು ಪರಿಹರಿಸಿ ।
ಶ್ರೀ ಭೂರಮಣ ಜಗನ್ನಾಥವಿಠಲ ಪೊರೆವ ಬೇಡಿದಿಷ್ಟಾರ್ಥವಿತ್ತು ॥೯॥

## ॥ ಶ್ರೀ ವಿಜಯವಿಠ್ಠಲ ॥

೨ ಪದ ರಾಗ–ಭೂಪಾಳಿ ಝಂಪೆತಾಳ

ಪುಣ್ಯಕ್ಷೇತ್ರವ ಸ್ಮರಿಸಿರೋ ॥ ಪ ॥
ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿರೊ ನಿಮ್ಮ ।
ಮನ್ಯು ಮಿಕ್ಕಾದ ಮಹದನ್ಯಾಯ ಮರೆದು ।
ಅನುಗುಣ್ಯದಲ್ಲಿರೆ ಭವದಾರಣ್ಯ ದಹಿಸುವದು ।
ಕಾರುಣ್ಯದಲಿ ಹರಿ ಪಲಿವ ॥ ಅ. ಪ ॥

ಶೇಷಪರ್ವತ ಗರುಡಾದ್ರಿ ಶ್ರೀಶೈಲ ಪ್ರ ।
ಭಾಸಕ್ಷೇತ್ರ ಮಧುರಿ ಗೋಕುಲ ವೃಂದಾವನ ।
ನಾಸಿಕ ತ್ರಯಂಬಿಕ ಮೌದ್ಗಲ ಕ್ಷೇತ್ರ ಪರಾಶರನ ಮಗನಾಶ್ರಮಾ ॥
ಲೋಶತೆಲಿ ತೋತಾದ್ರಿ ಕುಂಭಕೋಣ ವಾ ।
ರಣಾಸಿ ಭಾರದ್ವಾಜ ಕ್ಷೇತ್ರ ಅರುಣಾಚಲಾ ।
ದೋಷವರ್ಜಿತ ಝುಲ್ಲಿಕಾರಣ್ಯ ಸೇತುದರ್ಭಶಯನ ಮಧ್ಯಾರ್ಜುನ

ಸುಂದರ ಶಿಲಾಜೇಚಯ ಜಂಬುಕೇಶ್ವರ ಮಹಾ ।
ನಂದಿ(ಸಿ)ನಿ ಚಿದಂಬರ ವೀರರಾಘವದೇವ ।
ಸಂದಿನಿಪ್ಪ ಸ್ವಾಮಿ ಕಾರ್ತೀಕ ಭೂಶೇಷ ನಂದಏಕಾಂಬರೀಶ ।
ಅಂದವಾದ ಛಾಯಾ ಅಲಕಾಪುರಿಕ್ಷೇತ ।
ಮಂದಾಕಿನಿಯಿಪ್ಪ ಸಗರಾ ಯಯಾತಿ ಗಿರಿ ।
ಮಂದಮತಿ ಕಳೆವಂಥ (ನಗರೀ) (ಘನಗಿರಿ) ಕ್ಷೇತ್ರ ಧರ್ಮಪುರಿ
ಒಂದೊಂದು ಕೋಟೇಶ್ವರ ॥೨॥

ಶ್ರೀರಂಗ ಹಸ್ತಗಿರಿ ಪಾಂಡುರಂಗಕ್ಷೇತ್ರ ।
ದ್ವಾರಕಾ ಸಹ್ಯಾದ್ರಿ ನೀಲಕಂಠಾನಗರಿ ।

ಚಾರು ಗಯ ಚಂಪಕಾರಣ್ಯ ಪಂಪಾಕ್ಷೇತ್ರ ವೀರನಾರಾಯಣಾ ಓಂ ।
ಕಾರುಣ್ಯ ಮಾಳ್ವರಾಮನಗಿರಿ ಮಾಯಾ ಕೇ ।
ದಾರ ಕುರುಕ್ಷೇತ್ರ ಉತ್ತರ ಕುರಂಗ ನಿಧಿ ।
ಸಾರಿದರ ಬರುವ ಪುರುಷೋತ್ತಮ ಪುಷ್ಕರಕ್ಷೇತ್ರ ಮಾರಕಾಪುರಿ ಚನ್ನನ ॥೩॥

(ಉದಯಗಿರಿ) ಯಾದುಗಿರಿ ರಾಮನಾಥಪುರಾ ಕಾವೇರಿ ।
ಉದುಭವಾ ಆದಿ ಅನಂತ ವಲ್ಕಲಕ್ಷೇತ್ರ ।
ಪದುಮನಾಭ ಪುಂಡಲೀಕಾಕ್ಷ ವಿಂಧ್ಯಾದ್ರಿ ಸುಧಿಯಿಂದ ಕನ್ಯಾಕುಮಾರಿ ॥
ಮಧುರಿ ಅಳಿಗಿರಿ ತಿಮ್ಮ ಬೇಲೂರ ಚೆನ್ನಿಗ ।
ಮುದದಿಂ ಮಹಂಕಾಳಿ ಹಸ್ತಿ ಪರಳಿನಾಥ ।
ಕುದಳಿ(ರಿ) ಮಂಗಳಗಿರೀ ತೊರವಿ ನರಸಿಂಹ ಪದ(ಮುರಳಿ) ಮರುಳ
ತ್ರಿವಿಕ್ರಮಾ ॥ ೪ ॥

ಹರಿಹರಾ ಗಂಗಾಸಾಗರ ಕಪಿಲಕ್ಷೇತ್ರ
ನಿರುಪಮಾದ್ರೀ ಕೂರ್ಮ ನೆಲ್ಲಿ ನವತಿರುಪತಿ ।
ಶೂರ್ಪಾಲಿ ಮಹಳೇಶ್ವರ ಭದ್ರಾಚಲ ಧರಣಿಧರ ಚಾಪಪಾಣಿ ॥
ಪರಿಶುದ್ಧ ಭಕ್ತವತ್ಸಲ ಗೌರಿವಯ್ಯಾರ (ವೈಮೂಖಿ) ।
ವರಸಾರ ಕ್ಷೇತ್ರವು ಶ್ರೀನಿವಾಸನ ನಿಧಿಯು ।
ಪರಮ ಮಂಗಳವೀವ ಮನ್ಯಾರಸ್ವಾಮಿ
ಘನಶ್ಯಾಮ ವರಗೌರಿ ಮನೋಹರ ॥೫॥

ಶಂಕರ ನಾರಾಯಣಾ ಉಮತೋರು ಗೋಕರಣ ।
ಸಂಕರುಷಣ ಕ್ಷೇತ್ರ ಗೋರಂಟ್ಲ (ಶ್ವೇನ) (ಶೇತು) ವನ ।
ಶಂಖಮುಖಿ ಗಜೇಂದ್ರಮೋಕ್ಷ ಗಜಾರಣ್ಯ ಓಂಕಾರನಾಥ ದೇವ ।
ಪಂಕಜಾಸನ ಸದನ ಸಿಂಹಾಳಿ ವೈದ್ಯನಾಥ ।
(ಟೆಂಕಾಶಿ ಅಂತರು) (ಠಂಕಾಳಾಂತರ) ವೇದಿಗೋಪಾಲನಿಧಿ ।
ಬಿಂಕದಲಿ ಇಪ್ಪ ಚಿಂತಾಮಣಿ ನರಸಿಂಹಾಲಂಕಾರೆ ಮೌಕ್ತಿಕ್ಷೇತ್ರ ॥೬॥

ಸಂತಾನ ಗೋಪಾಲ ತ್ರಿಶಿಖ ನಾರಾಯಣ ಅ ।
ನಂತ ಗಿರಿ ಮಳಲೂರು (ಮಳೂರು) ಅಪ್ರಮೇಯಾಶಿವಾ ।
ಅಂತಕನ ಗೆದ್ದಪುರ ತೀರ್ಥಗಿರಿ ನೀವರ್ತಿ ಆಂತು ಆದೀ ಶ್ರೀರಂಗ ।
ಇಂತು ಪಾವನಕ್ಷೇತ್ರ ಪ್ರೇತಗಿರಿ ನೀಲಾದ್ರಿ ।

ಸಂತವೇದಾರಣ್ಯ (ನೀಲಾರಣ್ಯ) ರಾಜವನ ನೈಮಿಷಾ ।
ಕಾಂತಾರ ದಕ್ಷವನ ಶುದ್ಧವಾಟ್ ಪುಷ್ಪಪಿರಿ ಕಂತುಹರ ನಂಜುಭೋಕ್ತ ॥7॥
ಕೋಲಪರ್ವತ ಕಣ್ವಮುನಿ ಕ್ಷೇತ್ರ ಪಿನಾಕಿನೀ ।
ಮಾಲೆಯುಂದದಲಿಪ್ಪ ನಿಧಿ ಮಾಧವಸ್ವಾಮಿ ।
ಮೇಲು ಘಟಿಕಾಚಲಾ ಬದರಿನರಸಿಂಹ ರವಿ (ಸೇತು) ಶೈಲಗುಣ ।
ಮುಕುತೇಶ್ವರ
ಕಾಲದೂತರ ಗೆದ್ದ ಕ್ಷೇತ್ರ ಭವಾನಿ ಗುಡಿ ।
ವ್ಯಾಳನಿಧಿ ಮಹಲಕುಮಿ ರಘುನಾಥ ಶಿವಗಂಗೆ ।
ಬಾಳಕೃಷ್ಣಾಕ್ಷೇತ್ರ ಕರವೀರ ಪುರವೋ ವಿಶಾಲವಿಹಂಗಕ್ಷೇತ್ರ ॥೮॥
ದೇಶದೊಳಗುಳ್ಳ ಪುಣ್ಯಕ್ಷೇತ್ರಗಳ ಮಹಿಮೆ ।
ಏಸು ಪೇಳಲಿ ಎನಗೆ ವಶವಲ್ಲವೈಯಾಪ್ರ ।
ದೋಷ ಕಾಲದಲಿ ಪ್ರಭಾತ ಕಾಲದಲೆದ್ದು ನೆನಸುವದು ಮಾನವರು
ಮೇಸಲಾ ಮನದಲ್ಲಿ ಅನಂತ ಜನುಮದಾ ।
ದೋಷ ವಿನಾಶ ಶ್ರೀ ವಿಜಯವಿಠಲ ವೊಲಿದು ।
ಲೇಸಾಗಿ ಪಾಲಿಸುವ ಕುಲಕೋಟಿ ಉದ್ಧರಿಸಿ ಮೀಸಲಾ ಪದವೀವನೂ ॥೯॥

**... ಈ ಪದದ ವಿವರ ...**

ಕ್ಷೇತ್ರಗಳು

1) ಶೇಷಪರ್ವತ (ವೆಂಕಟಗಿರಿ)
2) ಗರುಡಾದ್ರಿ (ಅಂಕೋಬಲ)
3) ಶ್ರೀಶೈಲ
4) ಪ್ರಭಾಸಕ್ಷೇತ್ರ
5) ಮಧುರಿ
6) ಗೋಕುಲ
7) ವೃಂದಾವನ
8) ನಾಶಿಕಾ
9) ತ್ರಯಂಬಕ
10) ಮುದ್ಗಲ ಕ್ಷೇತ್ರ
11) ಪರಶುರಾಮ
12) ತೋತಾದ್ರಿ
13) ಕುಂಭಕೋಣ
14) ವಾರಣಾಸಿ
15) ಭಾರದ್ವಾಜಕ್ಷೇತ್ರ
16) ಅರುಣಾಚಲ
17) ಝುಲ್ಲಿಕಾರಣ್ಯ
18) ಸೇತು
19) ದರ್ಭಶಯನ
20) ಮಧ್ಯಾರ್ಜುನಾ
21) ಶಿಲಾಜಯ
22) ಜಂಬುಕೇಶ್ವರ
23) ಮಹನಂದಿನಿ ಕ್ಷೇತ್ರ
24) ಚಿದಂಬರ
25) ವೀರರಾಘವದೇವಃ
26) ಸ್ಕಂದ ಸ್ವಾಮಿ, ಕಾರ್ತಿಕಾ ಭೂ-ಭೂಶೇಷ
27) ಏಕಾಂಬರೇಶ್ವರ
28) ಛಾಯಾಕ್ಷೇತ್ರ

29) ಅಲಕಾಪುರಿಕ್ಷೇತ್ರ
30) ಮಂದಾಕಿನಿ ಇಪ್ಪಸಗರ
31) ಯಯಾತಿ ಗಿರಿ
32) ಆವಂತ್ಯನಗರಿ
33) ಧರ್ಮಪುರಿ
34) ಕೋಟೇಶ್ವರ
35) ಶ್ರೀರಂಗ
36) ಹಸ್ತಗಿರಿ
37) ಪಾಂಡುರಂಗಕ್ಷೇತ್ರ
38) ದ್ವಾರಕಾ
39) ಸಹ್ಯಾದ್ರಿ
40) ನೀಲಕಂಠನಗರಿ
41) ಗಯಾ
42) ಚಂಪಕಾರಣ್ಯ
43) ಪೋಂಪಾಕ್ಷೇತ್ರ
44) ವೀರನಾರಾಯಣ ಕ್ಷೇತ್ರ
45) ಓಂಕಾರೇಶ್ವರ
46) ರಾಮನಗರಿ
47) ಮಾಯಾಪುರಿ
48) ಕೇದಾರ ಕ್ಷೇತ್ರ
49) ಕುರುಕ್ಷೇತ್ರ
50) ಕುರಂಗಕ್ಷೇತ್ರ
51) ಪುರುಷೋತ್ತಮ
52) ಪುಷ್ಕರ ಕ್ಷೇತ್ರ
53) ಮಾರಕಾಪುರಿಚನ್ನ
54) ಯದುಗಿರಿ
55) ರಾಮನಾಥಪುರ
56) ಕಾವೇರಿಉದುಭವ ಆದಿಅನಂತ
57) ವಲ್ಕಲಕ್ಷೇತ್ರ
58) ಪದುಮಾನಂತ
59) ವಿಂದ್ಯಾದ್ರಿ
60) ಸುಧಿಯಿಂದ್ರ
61) ಕನ್ಯಾಕುಮಾರಿ
62) ಮಧುರಿ
63) ಅಳಗಿರಿತಿಮ್ಮ
64) ಬೇಲೂರು ಕೇಶವ
65) ಮಹಂಕಾಳಿಕ್ಷೇತ್ರ
66) ಹಸ್ತಿ (ಗಿರಿ)
67) ಪರಳಿನಾಥ
68) ಕದಳಿ
69) ಮಂಗಳಗಿರಿ
70) ತೊರವಿ ನರಸಿಂಹ
71) ಪದುಮರುಳು (ತ್ರಿವಿಕ್ರಮಾರ್ಯಾ)
72) ಹರಿಹರ
73) ಗಂಗಾಸಾಗರ
74) ಕಪಿಲಾಕ್ಷೇತ್ರ
75) ಕೂರ್ಮಕ್ಷೇತ್ರ
76) ನವತಿರುಪತಿ)
77) ಶೂರ್ಪಾಲಿ
78) ಮಹಾಬಳೇಶ್ವರ
79) ಧರಣಿಧರ ಚಾಪಪಾಣಿ
80) ಪರಿಶುದ್ಧಗೌರಿ ಕ್ಷೇತ್ರ
81) ಶ್ರೀನಿವಾಸನಿಧಿ
82) ವರಸಾರಕ್ಷೇತ್ರ
83) ಗೌರಿಮಯೂಖ
84) ಶಂಕರನಾರಾಯಣ
85) ಉಮತ್ತೋರು
86) ಗೋಕರ್ಣ
87) ಸಂಕರುಷಣ ಕ್ಷೇತ್ರ
88) ಗೋರಂಟ್ಲ
89) ಶ್ವೇನವನ
90) ಶಂಖಮುಖಿ

91) ಗಜೇಂದ್ರಮೋಕ್ಷ
92) ಗಜಾರಣ್ಯ
93) ಓಂಕಾರನಾಥದೇವಃ
94) ಪಂಕಜಾಸನಸದನಸಿಂಹಾಳಿ
95) ವೈದ್ಯನಾಥ
96) ಟಿಂಕಾರಿ (ಸಿ)
97) ಅಂತರಾವೇದಿಗೋಪಾಲನೀ
98) ಚಿಂತಾಮಣಿ
99) ನರಸಿಂಹಾಲಂಕಾರಮೌಕ್ತಿಕಕ್ಷೇತ್ರ
100) ಸಂತಾನ ಗೋಪಾಲ
101) ತ್ರಿಶಂಖನಾರಾಯಣಃ
102) ಅನಂತಗಿರಿ
103) ಮಳಲೂರು
104) ಪುರತೀರ್ಥ
105) ನಿವರ್ತಿಗಿರಿ
106) ಆದಿ ಶ್ರೀರಂಗ
107) ಪ್ರೇತಗಿರಿ
108) ನೀಲಾದ್ರಿ
109) ವೇದಾರಣ್ಯ
110) ರಾಜವನ
111) ನೈಮಿಷಾರಣ್ಯ
112) ದಕ್ಷವನಾ
113) ಶುದ್ಧವಾಟ
114) ಪುಷ್ಪಗಿರಿ
115) ನಂಜುಂಡೇಶ್ವರ
116) ಕೋಲಪರ್ವತ
117) ಕಣ್ವಮುನಿಕ್ಷೇತ್ರ
118) ಪಿನಾಕಿನಿ
119) ಮಾಧವಸ್ವಾಮಿ
120) ಘಟಿಕಾಚಲ
121) ಬದರಿ ನರಸಿಂಹ
122) ರವಿಶೈಲ
123) ಮುಕುಲೇಶ್ವರಃ
124) ಭವಾನಿಗುಡಿ
125) ಕಾಲದೂತರ ಗೆದ್ದಕ್ಷೇತ್ರ
126) ವ್ಯಾಳನಿಧಿ ಮಹಲಕುಮಿ ರಘುನಾಥ
127) ಶಿವಗಂಗೆ
128) ಬಾಳಕೃಷ್ಣಕ್ಷೇತ್ರ
129) ಕರವೀರಪುರ
130) ವಿಹಂಗಕ್ಷೇತ್ರ



## ॥ ಶ್ರೀ ವಿಜಯವಿಠಲ ॥

3 ಪದ ಉದಯರಾಗ ಝಂಪೆತಾಳ

ನದನದಿಗಳನು ಸ್ಮರಿಸಿರೋ । ನದನದಿಗಳನು ಸ್ಮರಿಸಿ ಹೃದಯ
ನಿರ್ಮಳರಾಗಿ । ಮುದದಿಂದ ನಿಮ್ಮ ಮನದಧಮತನ ಬಿಟ್ಟು
ಸಂ । ಪದವಿಗೆ ಸೌಪಾನದಂತಾಗುವದು ಶ್ರೀ ಪದುಮನಾಭನು
ವೊಲಿವನು ॥ಪ॥ ಸುರತರಂಗಿಣಿಸಿಂಧು । ಕುಶವರ್ತಳೇಸೀತ ।
ಮರಧೃತಿ ಹೇಮವತಿ । ನೇಮಿನೇತ್ರವತಿ । ತರಣಿಸುತೆ
ನರ್ಮದಾ । ಗಾಯತ್ರಿ ಗೋಮತಿ ಗರಡ ಸಾ..,...ಧರ್ಮ ॥
ಸರಸ್ವತಿ ಮಣಿಮುಕ್ತ ಮುಕ್ತನದಿಯಾ । ಪ್ರಣವತವರದ ಕಾಗಿಣಿ ।
ಕೃಷ್ಣವೇಣಿ ವೇದವತಿ । ಹರಿಧೃತಿ ಇಂದ್ರಾಣಿ ॥ ಪುನಃ ಪುನಃ
ವಾಣಿ ವಂಜರಘಣಿ ಭೀಮರಥಿ ನೀ ॥೧॥ ವಾರುಣಿ ವರುಣ
ಅಸಿ । ಭುವನಾಶಿ ಕುಮಾರಧಾರಿ ತುಂಗಭದ್ರ । ಗಣಪತಿ
ಶತಭಾಗ । ನಾರದೀ ಉಭಯ ಪಿನಾಕಿ ಚಿತ್ರವತಿ । ಮೂರು
ಲೋಕೋದ್ಭವ ಭವಾನಿ ॥ ಚಾರು ಗಂಡಿಗೆ ಸರಯು ಶ್ರೋಣಿ
ಭದ್ರಾ ನೀಲ । ಕ್ಷೀರನದಿ ಪಾಪಘ್ನವಾಹನದಿ ಅಪನಾಶಿ
ವಾರಿಜಾಪ್ತಾವತಿ ಸುವರ್ಣ ಮುಖರೀವಿ।ಸ್ತಾರ
ಹಾಟಕ ತ್ರಿವೇಣಿ ॥೨॥ ಮಲಾಪಹಾರಿ ತಪತಿ ಪೂರ್ಣ
ಕುಮುದ್ವತಿ । ಸುಲಭ ಮಂದಾಕಿನಿ ಕವೋದತೀ ಶಾಂತಿ ।
ಫಲ್ಗುಣೀ ವೇಗವತಿ ಅರ್ಜುನ ಮಹೇಶ್ವರೀ । ಕಪಿಲ
ಚಂದ್ರಭಾಗಾ ಅರುಣೀ ॥ ಪೊಳೆವ ಕಳಾವತಿ ತ್ರಿಪತಿ
ಗೌರಿಕುಂತಿ । ಅಳಕನಂದನ ಅಮಲವತಿ ಭಿಮಸಂಭೆ...
...ಸಿ, ತಾಂಬ್ರಪರ್ಣಿಯು ಜಯಮಂಗಳೀ ಸಲೆ
ಸತ್ಯವತಿ ವೈಶ್ಣವಿ ॥೩॥ ಕನಿಕ ಶುಕ್ಲಾವತಿ ಬಾಹುನದಿ
ಗೋವಿಂದ.....ಸುತಿ ಕಲ್ಯಾಣ ಕೌಂಸಿಕ । ಮಿನಗುವ
ಭೋಗವತಿ ಕಾಶ್ಯಪೀ ಕಾಳಿಂದಿ । ಅನುಸಿಂಧು ಐರಾವತೀ ।
ಋಣವಿಮೋಚನ ಮಯೂರ ಸಂಭವೆ । ಘನ ಸ್ವಾಮಿ ।
ಚಂದಿರಾ ನಿತ್ಯ ಪುಷ್ಕರಣೀ ಪಯೋ । ಶ್ವಿನಿ ಮಹಾ ಪಗ, ಭದ್ರ
ಭೈರವಿ, ವಿಚಿತ್ರ ನದಿ ॥೪॥ ಅರುಣೋದಯದಲೆದ್ದು ಧರೆ
ಯೊಳಗೆ ಉಳ್ಳ ಬಲು । ಸಂತಗಳ ನೆನೆದು ಪುಳಕೋತ್ಸಹದಲಿ ।
ಪರಮ ಧನ್ಯರಾಗಿ ಪಾಪಗಳ ಪೋಗಾಡಿ
ನಿರುತ ಮಾರುತ ಮತದಲಿ ॥ ಚರಿಸಿ ನಿಜಭಕುತಿಯಲಿ ।

ಹಗಲು ಇರುಳು ಇನಿತು । ಸಿರಿಯರಸ ವಿಜಯವಿಠಲನ ।
ಚರಣಾಂಬುಜವ ಸರಸದಿಂದಲಿ ಧ್ಯಾನಗೈದು ಈ ನದಿಗಳಲಿ ।
ಕರುಣದಲಿ ತಿಳಿದು ನಿತ್ಯ ॥೫॥

# ನದಿಗಳ ತಾರತಮ್ಯ ಸ್ತೋತ್ರ

(ಶ್ರೀ ಪ್ರಾಣೇಶ ವಿಠಲ ವಿರಚಿತ)

4 ಪದ–ರಾಗ–ಸಾವೇರಿ ಆದಿತಾಳ

ಸ್ಮರಿಸುವೆನನುದಿನ ಮುದದಿಂದ । ಈ । ಧರಿಯ ಮ್ಯಾಲ್ಮ್ಯಾಳ್ಳ ಮಹ
ನದಿಗಳ ॥ಪಲ್ಲ॥ ಗೌತುಮನಘ ಪರಿಹಾರ ಮಾಡಿದ ಗೋದ ,
ಮಾತೆ ಶ್ರೀ ಕೃಷ್ಣವೇಣಿ ಸರಸ್ವತೀ ॥ ಆ ತರುವಾಯ ಶ್ರೀ
ಕಾವೇರಿ ಸರಯು ಶ್ರೀ ಯಮುನಾ । ಧೌತಪಾತಕೆ ಶ್ರೀ ನರ್ಮದ
ತುಂಗಾ ॥೧॥ ಸಿಂಧು ಭವನಾಶಿನಿ ಕುಮುದ್ವತಿ ಶ್ರೀ ಮಂಝೂರ ।
ಸುಂದರ ಭೀಮ ತಾಮ್ರಪರ್ಣಿ ಮಲಹಾ । ಮಿಂದರೆ ಪಾವನ
ಮಾಡುವ ಬಹುದಿನಗಳ । ಒಂದೇ ಮನಸಿಲಿಂದ ಪೊಗಳುವೆ ॥೨॥
ವಾರುಣೀ ಫಲ್ಗುಣೀ ಶ್ರೋಣ ಭದ್ರ ಗಂಡಿಕಿ ಹೇಮ । ಮೂರು
ವೇಣಿ ಗಾಯತ್ರೀ ವೇಗವತಿ ॥ ಸೂರಿಗಮ್ಯ ಕೌಶಿಕ ಮಣಿಕರ್ಣಿಕ
ಗೌತುಮಿ ಭಾ । ಗೀರಥಿ ಕಾಗಿನಿ ಶ್ರೀ ವೇತ್ರವತಿ ॥೩॥ ಹೇಮ
ವತಿ ನೇತ್ರವತಿ ಪಾಪನಾಶೀ ಶ್ರೀ ಸೀತಾ । ಆ ಮಹಾಳಕ
ನಂದಾ ಹಯಗ್ರೀವ । ಹೇಮ ಮುಖರ ತಾಪಿನಿ ಕಾಳಿ ಸೌಪರಣಿ
ಪಿನಾಕೀ । ಶ್ರೀ ಮತ್ಕಪಿಲ ಜಮದಗ್ನಿ ಪ್ರಣವಸಿದ್ಧ ॥೪॥
ಮರುದ್ವತಿ ಮದಿರ ಮೇನುಕಾ ಸುನಾಸಿ ಚಕ್ರವತಿ ಗರುಡ
ಶಂಖವತೀ ಕುಹುಮಹೇಶ್ವರಿ । ಸರಯು ಜಯಮಂಗಳ
ಯೋಗಕೃತುಮಾಲಾ ಗದಧರಿ ಮಾಲಿನಿ ಗಾರ್ಗಿಣೀ ದೇವವತಿ ॥೫॥
ಸಾವಿತ್ರಿ ಧನ್ಯಮಾಲ ಧರ್ಮ ಚಕ್ರತೀರ್ಥ ಹರಿ । ದ್ರಾವತ್ರಿ
ಇಂದ್ರಾಣಿ ಪಾತಾಳಗಂಗಾ ॥ ಶೈವ ಕುಂದಕುಂಡಿನಿ ನೀರ
ಕುಮಾರಧಾರಿ ಕು । ಶಾವರ್ತಿ ಮೌಳಿ ಲೋಕ ಪಾವನೀ ॥೬॥
ಸ್ವಾಮಿ ಪುಷ್ಕರಣಿ ಚಂದ್ರ ಪುಷ್ಕರಣಿ ಮಾನಸ ಪುಷ್ಕರಣೀ ।
ಶ್ರೀ ಮಧ್ವ ಸರೋವರ ಪದ್ಮಸರಾ ॥ ಸೋಮಭಾಗ ವ್ಯಾಸಸಿಂಧು ।
ಶ್ರೀ ಪಂಪಾ ಸರೋವರ । ವಾಮನ ಶ್ರೀ ಮಯೂರ ಸರೋವರ ॥೭॥

ರೋಮಹರ್ಷಣತೀರ್ಥ ಸೀತಾ ಸರೋವರ ಪುಣ್ಯಧಾಮಾ
ಶ್ರೀ ಕಪಿಲತೀರ್ಥ ಧವಳಗಂಗಾ | ಭೀಮಸೇನ ತಟಾಕ
ಬ್ರಹ್ಮಜ್ಞಾನ ಕನ್ಯಹೃದಯ ಶ್ರೀ ಮದ್ವಿಶಿಷ್ಟತೀರ್ಥ ತಾರಾ
ತೀರ್ಥ ॥೮॥ ಈ ತೀರ್ಥಗಳ ದಿವ್ಯನಾಮ ನಿತ್ಯ ಪಠಿಸಲು ।
ಯಾತಕ್ಕಾದರು ವಿಘ್ನ ಬಾರದು । ಮಾತರಿಶ್ವಪ್ರಿಯ ಪ್ರಾಣೇ
ಶ ವಿಠ್ಠಲನು ಬಹು । ಪ್ರೀತನಾಗಿ ಬಿಡದೆ ಪೊರೆವನು ॥೯॥

# ತೀರ್ಥಮಹಿಮಾ ಪದಗಳು

## ಶ್ರೀ ಭಾಗೀರಥಿ, ಗಂಗಾನದಿಯ ಸ್ತೋತ್ರ

(ಶ್ರೀ ಪುರಂದರ ವಿಠ್ಠಲ)

5 ಪದ-ರಾಗನಾಟಿ ತಾಳ–ಝಂಪಿ

ಭಾಗೀರಥಿದೇವಿ ಭಯನಿವಾರಣ ಗಂಗೆ | ಸಾಗರದ ನಿಜರಾಣಿ
ಸಕಲ ಕಲ್ಯಾಣಿ ॥ಪ॥ ಒಮ್ಮೆ ಶ್ರೀಹರಿ ಪಾದಕಮಲದಿಂದುದುಭ
ವಿಸಿ ಬ್ರಹ್ಮ ಕರಪಾತ್ರಿಯಲಿ ನಿಂದು ಬಂದೆ | ಶ್ರೀಮನ್ನಾರಾಣನ
ಪಾದತೀರ್ಥವಾಗಿ । ಬ್ರಹ್ಮಾಂಡವನು ಪಾವನ ಮಾಡ ಬಂಡೆ ॥೧॥
ದೇವಿ ನೀ ವಿಷ್ಣು ಪಾದೋದಕವಂದೆನಿಸಿ । ದೇವತೆಗಳಿಗೆಲ್ಲ
ಅಧಿಕವಾದೆ । ದೇವರೆಲ್ಲರು ನೆರೆದು ತಲೆವಾಗಿದರು ಮಹ |
ದೇವನ ಶಿರದಿಂದ ಧರೆಗಿಳಿದು ಬಂದೆ ॥೨॥ ಜನ್ಹುವಿನ ಉದರ
ದಲಿ ಪೊಕ್ಕ ಕಾರಣದಿಂದ ಜಾನ್ಹವಿಯೆಂದು ನೀ ಎನಿಸಿಕೊಂಡೆ ॥
ಮುನ್ನೆ ನರಕಕ್ಕಿಳಿದ ಸಗರರಾಯನ ವಂಶ।ವನ್ನು ಪಾವನ
ವಿನ್ನು ನೀ ಮಾಡಬಂದೆ ॥೩॥ ದಿಟ್ಟಿಸಲು ಮುನ್ನೂರು
ಜನ್ಮದ ಪಾತಕವು । ನೀಟಿಸಲು ಮೂರು ಜನ್ಮದ ಮುಕುತಿಯು ।
ಮುಟ್ಟಿ ಮಾಡಿದರೆಂದು ಸ್ನಾನ ಮಾತ್ರದಲಿ । ಸುಟ್ಟು ಹೋ
ಹದು ಸಾಹಸ್ರ ಜನ್ಮದ ಪಾಪ ॥೪॥ ಹಲವು ಪರಿಯಲ್ಲಿ
ಹರಿಸ್ಮರಣೆಯಿಲ್ಲದೆ ಭವ।ದೊಳಗೆ ಶಿಲ್ಕಿ ಕಡುನೊಂದೆ ನಾನು ॥
ಹಲವು ಮಾತ್ಯಾಕೆ ಶ್ರೀ ಪುರಂದರ ವಿಠ್ಠಲನ । ಚಲುವ ಪದ
ನಖದಿಳಿದೆ ವೊಲಿದು ದಯ ಮಾಡೆ ॥೫॥

( ಶ್ರೀ ವಿಜಯವಿಠಲ )

6 ಪದ-ರಾಗ-ಮೋಹನಕಲ್ಯಾಣಿ ಆದಿತಾಳ

ಗಂಗೆ ಸನ್ಮಂಗಳಾಂಗೆ ರಂಗನಂಘ್ರಿಯ ಸಂಗೆ । ತುಂಗೆ ಕಾರುಣ್ಯಾಪಾಂಗೆ ಅಸಿತಾಂಗೆ ತಿಂಗಳಾನನೆ ॥ಪ॥ ಪರಮೇಷ್ಟಿ ಪಾತ್ರಜಾತೆ ವರುಣನ್ನ ನೆಜದಯಿತೆ । ಸುರಮುನಿಗಣವಿನುತೆ । ವರದಾತೆ ಸರ್ವಖ್ಯಾತೆ ಹಾsss ॥ ತರಣಿಸುತನ ಉದ್ಧರಿಸಿದೆ ಕರುಣದಿ । ಧರೆಯೊಳು ನಿನಗೆ ಎದುರುಗಾಣೆ ಶರಣಾ ॥೧॥ ಭಯಪಾಪ ತಾಪದೂರೆ ಜಯಜಯ ಗುಣಸಾರೆ । ತ್ರಯಭುವನ ಉದ್ಧಾರೆ । ಅಯುತಾರ್ಕವರ್ನ ನೀರೆ ಹಾsss ॥ ನಯನವಭಕುತಿ ಹೃದಯದೊಳಗಿತ್ತು ಸಹಾಯ ದಿನ ದಿನ । ನಯನ ಶ್ರವಣವೇಣಿ ॥೨॥ ಘನ ವಾರಣಾಸಿ ಕಾಶಿ ವನ ಆನಂದ ನಿವಾಸಿ । ಪ್ರಣತ ಜನಘನಾಶಿ ಮಣಿಭೂಷೆ ಸೌಖ್ಯಾರಾಶೆ ಹಾsss ॥ ಅನನುತ ವಿಜಯವಿಠ್ಠಲನ ಮನಸಿನಲ್ಲಿ ನೆನಸುವ ಸಾಧನ ಕೊಡು ವಿರಜೆ ॥ ೩ ॥

7 ಉದಯರಾಗ ತಾಳ – ತ್ರಿವಿಡಿ

ಗಂಗೆ ಶೋಭನ ತರಂಗೆ । ರಂಗನಂಘ್ರಿಯುಂಗುಷ್ಟೆಸಂಗೆ ಭವಗಂಗೆ ॥ಪ॥ ಇಂದ್ರಸೇನನು ಸ್ವರ್ಗವ ಪರಿಹರಿಸಿ ಇರಲು ಉ।ಪೇಂದ್ರ ಭಗವಂತ ವಟುರೂಪ ಧರಿಸಿ ॥ ಚಂದ್ರಮಂಡಲಮೀರಿ ಬೆಳೆದ ಜಾಂಡವನೊಡೆಯೆ । ಸಾಂದ್ರ ಗುಣದಿಂದ ಉದ್ಭವಿಸಿದೆ ಜನನಿ ॥೧॥ ಕಮಲಜನು ಪಾತ್ರಿಯೊಳು ಧರಿಸಿ ಸಿರಿಹರಿ ಪಾದಕಮಲನು ತೊಳಿಯಲಾ ವೇಗದಿಂದ ॥ ವಿಮಲಗತಿಯಲಿ ಬಂದು ಮಂದಾಕಿನಿ ಎನಿಸಿ ಸುಮನಸಾವನಿಯಲ್ಲಿ ಹರಿದೆ ಸ್ವರ್ನದಿಯೆ ॥೨॥ ಧ್ರುವಲೋಕ ಕಿಳಿದು ಅಮರಾಲಯವ ಸಾರಿದೆ । ರವಿಯಂತೆ ಪೊಳೆಯುತ ಅಜನ ಮದ್ಧ್ಯ । ತವಕದಿಂದಲಿ ಧುಮುಕಿ ಚತುರಭಾಗವಾದೆ । ಭವ ಪರಿಹರಿಸಿ ಭಾಗೀರಥಿಯೆನಿಸಿದೆ ॥೩॥ ಶಿವನ ಪುಸ್ತಕದಲ್ಲಿ ಶೋಭಿಸುವ ಮಹಾಮಹಿಮ । ಭವದೂರೇ ಭಗೀರಥಗೆ ಒಲಿದು ಬರುತಾ ।। ಕವಿ ಜನ್ಹುಮುನಿಯಿಂದ ಪುಟ್ಟಿ ಹಿಮಗಿರಿದಾಟಿ । ಜವನ ಮನೆಯ ಕೂಡಿ ಮಣಿ

ಕರ್ಣಿಕೆ ನೆರೆದೆ ||೪|| ಅಳಕನಂದನೆ ನಿನ್ನ ಸ್ಮರಣೆ ಮಾಡಿದ
ಜನಕೆ ಕುಲಕೋಟಿ ಉದ್ಧಾರ ನಿಃಸಂದೇಹ || ಸಲಿಲವನು
ಸ್ಪರುಶ ಮಜ್ಜನ ಪಾನ ಮಾಡಿದರೆ ಪೊಳೆವ ವೈಕುಂಠ
ಪುರ ಅವನ ಹೃದಯದಲ್ಲಿ ||೫|| ಕುಲ ಪ್ರವಹ
ವಾಗಿದ್ದ ಜೀವರ ಪುಣ್ಯವನು | ಹೇಳಿ ಕೇಳುವನಾರು
ಮೂಲೋಕದಿ || ಶೀಲ ಗುಣಸಂಪನ್ನೆ ವರುಣನರ್ಧಾಂಗಿಣಿ |
ಕಾಲಕಾಲಕೆ ನಿನ್ನ ಧ್ಯಾನದಿಂದಲಿರಿಸು ||೬|| ದೇಶ ದೇಶದಲಿಂದ
ಬಂದ ಸುಜನರ ಪಾಪ | ನಾಶನ ಮಾಳ್ಪ ಕಾಮಿತ ಫಲಪ್ರದೆ ||
ಕಾಶಿ ನಿರ್ಮಿತ ಬಿಂದುಮಾಧವ ಜಲಂಪ | ಶ್ರೀನಿವಾಸ
ಯದುಪತಿ ವಿಜಯವಿಠ್ಠಲನ ಸುತೆ ಖ್ಯಾತೆ ||೭||

೮ ಪದ–ರಾಗ–ಮಾರವಿ ತಾಳ – ತ್ರಿವಿಡಿ

ಶ್ರೀ ಭಾಗೀರಥಿತಾಯೆ ಶ್ರಿಂಗಾರ ಶುಭಕಾಯೆ | ಶ್ರೀ ಭೂರಮಣ
ತನಯೆ ||ಪ|| ನಿನ್ನ ಯಾತ್ರೆಗೋಸುಗ ಎನ್ನ | ಮನಸು ಮುಟ್ಟಿತು
ಇನ್ನು ನೀ ಮರಿಸದೆ | ಪುಣ್ಯ ನರನ ಮಾಡೊ ಪೂತೋಭಾವ
ವೆಂದು ಧನ್ಯ ಜನಮಾನ್ಯೆ ಭಕ್ತ ಜನ ಪ್ರಸನ್ನೆ ||೧|| ಶಿವ ನಿನ್ನ
ಶಿರದಲ್ಲಿ ಧರಿಸಿದ ಕಾರಣ ಪವಿತ್ರಂಗನಾದನೆಂದು || ಅವನಿಯೊಳಗೆ
ಮಹಕವಿಜನ ಪೇಳಿದ | ಶ್ರವಣದಿಂದಲಿ ಭಕುತಿಯಿಂದಲಿ
ನಿಂದೆ ||೨|| ದೂರದಿಂದಲಿ ನಿನ್ನ ಸ್ಮರಿಸಿದವರ ಪಾಪ ಹಾರಿಪೋ
ಗುವದು ಸಿದ್ಧ | ಶ್ರೀ ರಮಣ ವಿಜಯವಿಠ್ಠಲರೇಯನ ಪಾದ|ವಾರಿಜ
ಪೊಗಳುವಂತೆ ಬುದ್ಧಿ ಪಾಲಿಸುವದು ||೩||

## ಗಂಗಾವತರಣ - ಮಂಗಳ

( ಶ್ರೀ ವಿಜಯವಠ್ಠಲ )

೯ ಪದ – ರಾಗ ತಾಳ –

ಶೋಭಾನವೆನ್ನಿರೆ ಸ್ವರ್ಗಾರೋಹಿಣಿನಿಗೆ | ಶೋಭಾನವೆನ್ನಿ
ಶುಭವೆನ್ನಿ ||ಪಲ್ಲ||
ಹರಿಪಾದ ನಖದಿಂದ ಬ್ರಹ್ಮಾಂಡವ ಸೀಳಲು ಭರದಿಂದ ಇಳಿದು
ಸತ್ಯಲೋಕ ಭರದಿಂದ ಇಳಿದು ಸತ್ಯಲೋಕಕ್ಕೆ ಬಂದ

ವಿರಜೆಗಾರುತಿಯ ಬೆಳಗಿರೆ ||ಶೋಭಾನೆ||೧|| ಸರಸಿ ಜಾಸನನಂದು
ಹರಿಪಾದ ತೊಳಿಯಲು ಸರಸ ಸದ್ಗುಣದಿ ಸುರಲೋಕ || ಸರಸ
ಸದ್ಗುಣದಿ ಸುರಲೋಕಕ್ಕೈದಿದ ಸ್ವರ್ನಗಾರುತಿಯ ಬೆಳಗಿರೆ ||ಶೋ||೨||
ಇಂದ್ರಲೋಕವ ಸಾರಿ ಧ್ರುವನ ಮಂಡಲಕಿಳಿದು | ಛಂದದಿಂದಲಿ
ಮೇರುಗಿರಿಗೆ || ಛಂದದಿಂದಲಿ ಮೇರುಗಿರಿಗೆ ಬಂದ ಸಿಂಧುವಿ ಗಾರುತಿಯ
ಬೆಳಗಿರೆ ||ಶೋ||೩|| ಶತಕೋಟಿ ಎಂತೆಂಬ ಅಜನ ಮಂದಿರ ಪೊಕ್ಕು | ಚತು-
ರ್ಭಾಗವಾಗಿ ಕರೆಸಿದ ಶ್ರೀ ಭೋಗಾ|ವತಿಗಾರುತಿಯ ಬೆಳಗಿರೆ ||ಶೋ||೪||
ಇಂದ್ರದಿಕ್ಕಿಗೆ ಸಿತಾ ಚಕ್ಷು ಪಶ್ಚಿಮದಿಕ್ಕು ಚಂದ್ರ ಯಮದಿಕ್ಕಿಗೆ ಭದ್ರದೇವಿ||
ಚಂದ್ರ ಯಮದಿಕ್ಕಿಗೆ ಭದ್ರಾದೇವಿ|ಅಳಕೆ ನಂದನಿ ಗಾರುತಿಯ ಬೆಳಗಿರೆ
||ಶೋ||೫|| ಕುಂದ ಮಂಥರೆ (ಮಂದಾರ)ಯಿಳಿದು ಗಂಧಮಾದನಗಿರಿಗೆ |
ಹಿಂಗದೆ ಪುಟಿದು ವಾರಿನಿಧಿಯಾ | ಹಿಂಗದೆ ಪುಟಿದು ವಾರಿನಿಧಿಯಾ ನೆರದಾ |
ಗಂಗೆಗಾರುತಿಯಾ ಬೆಳಗಿರೆ|೬|| ಗಿರಿಜ ಸುಪಾರ್ಶ್ವಕೆ ಧುಮುಕಿ ಮಾಲ್ಯವಂತಕೆ
ಜಿಗಿದು|ಪರಿದಂಬುಧಿಯಾ ಕೂಡಿ ಮೆರೆದೆ || ಪರಿದಂಬುಧಿಯಾ ಕೂಡಿ
ಮೆರೆದಾ | ತ್ರಿದಶೇಶ್ವರಿಗಾರುತಿಯಾ ಬೆಳಗಿರೆ ||ಶೋ||೭|| ಕುಮುದಾದ್ರಿಗೆ
ಇಳಿದು ನಳ(ಲಾ) ಶತಶೃಂಗ|ಕ್ಷಮಧಾರಿಗಳಿಗೆ ಹಾರಿ ಪನಧಿ ಕ್ಷಮಧಾರಿಗಳಿಗೆ
ಹಾರಿ ಪನಧಿ ಕೂಡಿದ|ಸುಮತಿ ಗಾರುತಿಯ ಬೆಳಗಿರೆ ||೮| ಮೇರು ಮಂದರ–
ಕಿಳಿದು | ವಿಷದ ಕಾಂಚನ ಕೂಟ ಮೀರಿ ಹಿಮಗಿರಿಗೆ ಹಾರಿ ಬದರಿಗೆ ಮೀರಿ
ಹಿಮಗಿರಿಗೆ ಹಾರಿ ಬದರಿಗೆ ಬಂದಾ ನಾರಿಗಾರುತಿಯ ಬೆಳಗಿರೆ ||ಶೋ ||೯||
ಕ್ಷಿತಿಪ ಭಗೀರಥನಂದು ತಪವಮಾಡಲು ನಲಿದು ಅತಿಶಯವಾಗಿ ಧರೆಗಿಳಿದು||
ಅತಿಶಯವಾಗಿ ಧರೆಗಿಳಿದು ಬಂದ ಭಾಗೀರಥಿಗಾರುತಿಯ ಬೆಳಗಿರೆ|೧೦| ಮುನಿ
ಜನ್ಹು ಮುದದಿಂವ ಆಪೋಷನವ ಮಾಡೆ | ಜನನಿ ಜಾನ್ಹವಿ ಎನಿಸಿದ ||ಜನನಿ
ಜಾನ್ಹವಿಯೆನಿಸಿದ ಮೂಜಗದ | ಜನನಿಗಾರುತಿಯ ಬೆಳಗಿರೆ ||ಶೋ||೧೧||
ವಿಷ್ಣು ಪ್ರಜಾಪತಿ ಕ್ಷೇತ್ರದಲಿ ನಿಂದು | ಇಷ್ಟಾರ್ಥ ನಮಗೆ ಕೊಡುವಳು |
ಇಷ್ಟಾರ್ಥ ನಮಗೆ ಕೊಡುವಳು ಸತತ ಸಂತುಷ್ಟಿಗಾರುತಿಯ ಬೆಳಗಿರೆ
||ಶೋ:|೧೨|| ಕ್ರಮದಿಂದ ಬಂದು ನಲಿಯುತ ಸರಸ್ವತಿ|ಯಮುನೇರ ನೆರದು
ತ್ರಿವೇಣಿ ಯಮುನೇರ ನೆರದು ತ್ರಿವೇಣಿ ಎನಿಸಿದ | ವಿಮಲೆಗಾರುತಿಯ ಬೆಳಗಿರೆ
||೧೩|| ಸತ್ವ ರಜೋತಮ ತ್ರಿವಿಧ ಜೀವರು ಬರಲು|ಅತ್ಯಂತವಾಗಿ ಅವರವರ
|| ಅತ್ಯಂತವಾಗಿಅವರವರ ಗತಿ ಕೊಡುವ ಮಿತ್ರೆಗಾರುತಿಯ ಬೆಳಗಿರೆ ||
ಶೋ||೧೪|| ಪತಿಯಸಂಗುತಿಯಿಂದ ನಡೆತಂದು ಭಕುತಿಯಲಿ ಸತಿಯಲ್ಲಿ ವೇಣಿ
ಕೊಡಲಾಗಿ||ಸತಿಯಲ್ಲಿ ವೇಣಿ ಕೊಡಲಾಗಿ ಕಾವ ಮಹಾಪ್ರತಿಗಾರುತಿಯ ಬೆಳಗಿರೆ
||೧೫||ವೇಣಿಯ ಕೊಟ್ಟಂತಹ ನಾರಿಯ ಭಾಗ್ಯವ|ಏನೆಂಬೆನಯ್ಯಾ ಪಡಿಗಾಣೆ|

ಏನೆಂಬೆನಯ್ಯಾ ಪಡಿಗಾಣೆ ಸುಖವೀವ ಕ। ಲ್ಯಾಣಿಗಾರುತಿಯಾ ಬೆಳಗಿರೆ ॥ಶೋ॥೧೬॥ ಒಂದು ಜನ್ಮದಲಿ ವೇಣಿಯಿತ್ತವಳಿಗೆ । ಎಂದೆಂದು ಬಿಡದೆ ಐದೆತನವ । ಎಂದೆಂದು ಬಿಡದೆ ಐದೇತನವೀವ ಸುಖ ಸಾಂದ್ರೆಗಾರುತಿಯ ಬೆಳಗಿರೆ ॥ಶೋ॥೧೭॥ ವಾಚಾ ಮಗೋಚರೆ ವರುಣನಅರ್ಧಾಂಗಿನಿ।ಪ್ರಾಚೀನ ಕರ್ಮಾವಳಿಹಾರಿ।ಪ್ರಾಚೀನ ಕರ್ಮಾವಳಿಹಾರಿ ಮಕರ । ವಾಚಾಳಿಗಾರುತಿಯ ಬೆಳಗಿರೆ ॥೧೮॥ ಅಂತರ ಬಾಹಿರ ಪಾಪ ಅನೇಕವಾಗಿರೆ। ಸಂತೋಷದಿಂದ ಭಜಿಸಲು ॥ ಸಂತೋಷದಿಂದ ಭಜಿಸಲು ಪೊರೆವ। ಮಹಕಾಂತೆಗಾರುತಿಯಾ ಬೆಳಗಿರೆ ಶೋ॥೧೯॥ಗುರು ಭಕುತಿ ತಾರತಮ್ಯ ಇಹ್ಯಪರದಲ್ಲಿ ತಿಳಿದು।ಹರಿಪರನೆಂದು ಪೊಗಳುವ॥ಹರಿಪರನೆಂದು ಪೊಗಳುವರಾ ಪೊರೆವ।ಕರುಣಿಗಾರುತಿಯಾ ಬೆಳಗಿರೆ ।ಶೋ॥೨೦॥ ಜಗದೊಳು ಪ್ರಯಾಗ ಕ್ಷೇತ್ರದಲ್ಲಿ ನಿಂದು ಬಗೆ ಬಗೆ ಶುಭವ ಕೊಡುವಳು । ಬಗೆ ಬಗೆ ಶುಭವ ಕೊಡುವ ವಿಜಯವಿಠ್ಠಲನ ಮಗಳಿಗಾರುತಿಯಾ ಬೆಳಗಿರೆ ॥ಶೋ ।೨೧॥

# ಪ್ರಯಾಗ ತ್ರಿವೇಣೀ ಮಹಿಮಾ

( ಶ್ರೀ ವಿಜಯವಿಠ್ಠಲ )

೧೦ ಪದ   ರಾಗ–ಕಾಂಬೋದಿ   ತಾಳ-ಝಂಪಿ

ಏನು ಪೇಳಲಿ ತೀರ್ಥಪತಿಯ ಮಹಿಮೆ । ಮಾನವರಿಗೆ ಇಲ್ಲಿ ಮುಕುತಿ ಪೇಳಲಳವಯ್ಯಾ ॥ಪ॥ ಕಾಶಿಯೊಳು ಮರಣ ಮುಕ್ತಿಯೆಂದು ಪೇಳುವದು । ದೇಶದೊಳು ಪುಶಿಯಲ್ಲ ಸಿದ್ಧವೆನ್ನಿ॥ಈಶನುಪದೇಶದಿಂದಲಿ ವಿಗತ ಜನನಾಗಿ। ಶ್ರೀಶ ತ್ರಿವೇಣಿ ಮಾಧವನ ಸನ್ನಿಧಿಗೈಯ್ಯಾ ।೧॥ ನಿರುತ ವ್ಯಭಿಚಾರಿ ವಿಪ್ರನ ಕೆಡಿಸಿ ಕಾಶಿಯಲಿ।ಇರಲು ಕಾಲಾಖ್ಯ ಉರಗನು ಕಚ್ಚಲು॥ಪರಮ ಭೀತಿಯಿಂದ ಅವಳ ವಸನವ ತಂದು।ವರ ತ್ರಿವೇಣಿಯೊಳಗೆ ತೋಯಿಸಲು ಗತಿಸಾರ್ದರು ॥೨॥ ಇಲ್ಲಿಗೆ ನಡೆತಂದು ಸ್ನಾನ ವೊಂದೇ ಮಾಡಲು।ನಿಲ್ಲದೇ ಸನ್ಮುಕ್ತಿ ಧರನಾಗುವ॥ ಬಲ್ಲಿದ ವಿಜಯವಿಠ್ಠಲ ವೇಣಿ ಮಾಧವನ ಸಲ್ಲಲಿತ ಪಾದವನು ಕಾಂಬ ಪ್ರಾಣೇಂದ್ರಿಯಲಿ ॥೩॥

# ಗಂಗಾ ತ್ರಿವೇಣಿ ಸ್ತೋತ್ರ

೧೧ ಪದ   ರಾಗ–ತೋಡಿ   ತಾಳ–ಆದಿ

ವೇಣಿ ಮಾಧವನ ತೋರಿಸೆ । ಜಾಣೆ ತ್ರಿವೇಣಿ ಕಾಣದೆ ನಿಲ್ಲಲಾರೆನೆ ॥ ಪ ॥ ಕಾಣುತ್ತ ಭಕ್ತರ ಕರುಣದಿ ಸಲಹುವ । ಜಾಣೇ ತ್ರಿವೇಣಿ ಕಲ್ಯಾಣಿ ಗುಣ–

ಪೂರ್ಣೆ॥ ಅ–ಪ ॥ ಬಂದೆನೆ ಬಿಹುದೂರದಿ ಭವಸಾಗರ ತರಣಿ। ನಿಂದೆನೆ ನಿನ್ನ ತೀರದಿ । ವೊಂದು ಘಳಿಗೆ ನಾ ಹರಿಯ ಬಿಟ್ಟಿರಲಾರೆ । ಮಂದಗಮನೆ ಎನ್ನ ಮುಂದಕೆ ಕರಿಯೆ ॥೧॥ ಶರಣಾಗತರನ್ನು ಪೊರೆವದು ನಿನ್ನ ಬಿರುದು। ಕರು– ಣದಿಂದೆನ್ನ ಕರೆವದು॥ ಸ್ಮರಣೆ ಮಾತ್ರದಿ ಎನ್ನ ಪಾಪವ ಪರಿದು। ಸ್ಮರನ ಪಿತನ ಮುರಹರನ ಕರುಣದಿ ॥ ೨ ॥ ಸುಜನರಿಗೆಲ್ಲ ದಾತಳೆ ಸುಶೀಲೆ ಕೇಳೆ । ಕುಜನರ ಸಂಗದೊರಳೆ ॥ ನಿಜ ಪದವಿಯನಿತ್ತು ಸಲಹುವ ನಮ್ಮ । ವಿಜಯ ವಿಠ್ಠಲನ ನಿಜಪದ ತೋರಿಸೆ ॥೩॥

**( ಶ್ರೀ ವಿಜಯ ವಿಠ್ಠಲ )**

೧೨ ಪದ ರಾಗ–ಭೂಪಾಳಿ ಝಂಪಿ ತಾಳ

ಧ್ಯಾನವನು ಮಾಡಿ ತ್ರಿವೇಣಿ ಕ್ಷೇತ್ರವ ಬಿಡದೆ । ಜ್ಞಾನ ಭಕ್ತಿ ವೈರಾಗ್ಯ ನಾನಾ ಸತ್ಕರ್ಮ ನಿ। ದಾನದಿಂ ಸಿದ್ಧಿಪುದು। ಮಾನಸದಲಿ ಸಿರಿ । ಪ್ರಾಣೇಶ ಕುಣಿಯುವನಯ್ಯ ಅಯ್ಯಾ ಅಯ್ಯಾ ॥ಪ ॥ ಹರಿ ವೀರದ್ರುಪವನುದ್ಧರಿಸಿ– ದಾಗಲು ತನ್ನ । ಶರೀರದಿಂದಲಿ ಅಷ್ಟ ಕ್ಷೇತ್ರಗಳ ಪುಟ್ಟಿಸಿ ॥ ವರದೇಶ ವೈಕುಂಠದಲ್ಲಿ ಇಟ್ಟನು ಸಪ್ತಗಿರಿ ಸಹಿತ ತೀರ್ಥರಾಜ॥ ಮೆರೆವದಿದೆ ಪುಂಕ್ಷೇತ್ರ ಉಳಿದವೇಳು ಸ್ತ್ರೀ । ಇರುತಿಪ್ಪವಲ್ಲಿ ಮಿಗಿಲಾದದಕೆ ಅತಿಶಯವೋ । ಧರಣಿಯೊಳಗಿದೆ ಕಾಲಾಂತರಕೆ ಹರಿ ತಂದಾಪಟ । ತರು ಸಹವಾಗಿ ಅಯ್ಯಾ ಅಯ್ಯಾ ಅಯ್ಯಾ ॥೧॥ ತರಣಿ ಸುತೆ ಮಾನಸೋತ್ತರ ಶೈಲದಲಿ ಕುಳಿತು । ವರರಾಜ ತೀರ್ಥಮಾಧವನ ಸಾರುವೆನೆಂದು । ಭರದಲಿ ತಪವನು ಮಾಡೆ ಸರಸಿಜೋದ್ಭವನೊಲಿದು ವರವಿತ್ತ ಮುಂದೇ ನೀನು ಧರೆಯೊಳು ಕಾಳಿಂದ- ರಾಯಗೆ ॥ ಕುವರಿಯೆನಿಸಿ ಮಹಾ । ಸತಿಯಾಗಿ ಪೋಗಿ । ಸಿರಿ ಮಾಧವನ ಚರಣ ಶರಣು ಪೋಗೆನೆ ಸಪ್ತ ಶರಧಿ ಭೇದಿಸಿಯಿಲ್ಲಿ ।ನೆರೆ ಮೆರೆದಳಯ್ಯ ಅಯ್ಯಾ ಅಯ್ಯಾ ಅಯ್ಯಾ ।೨। ತುರಗಮಾನೆಪದಿಂದ ಅರವತ್ತು ಸಾವಿರ ಸಗರನ ಕುಲದವರು ಕಪಿಲಾಖ್ಯ ಹರಿ ಮುನಿಯಿಂದ। ಉರಿದು ಪೋಗೆನಲಾಗಿ ಭ। ಗೀರಥ ಭೂಪತಿ ಉಗ್ರ । ಧುರದಿ ತಪವನ್ನೆ ಮಾಡೆ ॥ ಹರಿ ನಿರೂಪವ ತಾಳಿ ಗಿರಿ ಗಂಹ್ವರವ ನೊಡೆದು। ಸುರಗಂಗೆ ಬಂದು ತ್ರಿವೇಣಿ ಮಾಧವನ ಸಿರಿ । ಚರಣದೆಡೆಯಲ್ಲಿ ನಿಂದು ಯಮುನೆ ಒಡಗೂಡಿ ಬಾ ಮರವಾದಳೆಂದು ಅಯ್ಯಾ ಅಯ್ಯಾ ಅಯ್ಯಾ ।೩॥ ಸರಸ್ವತಿಯ ಬೆರದು ತ್ರಿವೇಣಿ ಸಂಗಮ– ವೆಂದು । ಕರೆಸಿಕೊಂಡಿತು ವಿಕರ ಸೋಮೇಶ್ವರ ತನಕ ಪರಮೆಷ್ಟಿಯಲ್ಲಿ ಗೈತಂದು ಬೊಮ್ಮಾಂಡವನು ಸರಿಮಾಡಿ ತೂಗಲಾಗಿ ಅರರೇ ಪೇಳುವದೇನು

ಸುರರು ಶಿರದೂಗುತಿರೆ । ವರರಾಜತೀರ್ಥ ಮಹಾಭಾರವಾಗಲು ಇದಕೆ । ಸರಿಮಿಗಿಲು ಇಲ್ಲೆನುತ ಪೊಗಳಿ ಕರೆದರು ಮಹಾವರದ ಪ್ರಯಾಗವೆಂದಯ್ಯಾ ಅಯ್ಯ ಅಯ್ಯ ॥೪॥ ಪುರವೈರಿ ನಟಣೆ ಪೂತುಲಸಿ ಸುರಪತಿ ವೈಶ್ವಾನರನು ತಿಲಹೋಮ ಯಮರಾಯ ಕಿಂಚಿತುದಾನ । ನಿಋುರುತಿತಪ್ಪೈತ್ರಿಕಕರ್ಮ । ವರುಣ ಜಲದಾನಸ್ತುತಿ ಮರುತಭೂತನು ಕುಬೇರ । ಅರಘಳಿಗೆ ವಸತಿ ಈ ವಟನಿ ಕಟ್ಟೆಯಲಿದ್ದು । ಪರಿಪರಿಯಿಂದಲಿ ಪೊಲಿಸಿ ಮಾಧವನಿಂದ । ಪುರು-ಷಾರ್ಥ ಪಡೆದು ಸೂಸಿದರು ಸಮಸ್ತಬಗೆ ಅರಿದು ಕೊಂಡಾಡಿ ಜನರೈಯ್ಯ ಅಯ್ಯಾ ಅಯ್ಯಾ॥೪॥ ಎರಡೊಂದು ಮೂರು ಕುಲದ ಮಧ್ಯ ನಿಂದು ಕರ್ತಾ ರಿಯೊಳಗೆ ಮಿಂದು । ಸತ್ಕರ್ಮವನೆಸಗಿ ಭೂ।ಸುರರ ಮೆಚ್ಚಿಸಿ ಮನದಿ ಪಾಪಗಳ ಉಚ್ಚರಿಸಿ। ಕರಣ ನಿರ್ಮಲಿನರಾಗಿ । ನರನಾರಿ ಈರ್ವಜನ ವಿಪ್ರ ಚಾಂಡಾಲ ಕುಲಪರಿಯಂತವಪನವೇ ಮುಖ್ಯವೆಂದು ತಿಳಿದು । ಚರಿಸಿದರೆ ಅನಂತ ಜನ್ಮಕ್ಕೆ ಮಹಸೌಖ್ಯ ಬರಿದೆ ಆಗದು ಕಾಣಿರಯ್ಯ । ಅಯ್ಯಾ ಅಯ್ಯಾ ॥ ೬ ॥ ಧರೆಯಮೇಲೆ ಬಿದ್ದ ಶಿಸುಗಳ ತಂದು ಮುಂಡಣವ । ಉರತರ ಬುದ್ಧಿಯಿಂದ ಮಾಡಿಲಿಸಲಿಬೇಕು ವಿ। ಸ್ತರಿಸುವೆನಯ್ಯ ಯೌವನ ವಾರ್ಧಿಕರಿಗೆ ನಿಜ। ವರ ನಾರಿಯರಿಗೆ ವೇಣಿ।। ಸರಿಯೆನ್ನಿ ಸಾತ್ವೀಕ ಪುರಾಣ ದಲಿ ಪೇಳಿದೆ। ಎರಡು ಭುಜದಲಿ ತಪ್ತಚಕ್ರ ವಿರಹಿತರಾಗಿ। ಬರಲು ಷಣ್ಮತ ಜನಕೆ ಗತಿಯಿಲ್ಲ ಮಿತಿಯಿಲ್ಲ ಸ್ಥಿರವಾಕ್ಯ ಲಾಲಿಪುದು ಆಯ್ಯಾ ಅಯ್ಯಾ ಅಯ್ಯಾ ॥ ೭ ॥ ಎರಡೈದು ತುರಗ ಕೃತ ಮೊದಲಾದ ತೀರ್ಥಗಳ ದೇವಮುನಿಗಳ ನಾಮದಲಿ ವೈಂಟು । ಪರಮ ಭಕುತಿಯಿಂದ ಮಜ್ಜನಾ-ದಿಯಮಾಡೆ ಪರಲೋಕ ಕರತಲದೊಳು ॥ ಇರುತಿಪ್ಪದಿನಿತು ಪ್ರಯಾಗ-ರಾಜನ ಸ್ಮರಣೆ ಮಾಡಿದ ಮನುಜ ಆವಲ್ಯ । ದರುಇರಲು ಮರಣಕಾಲಕೆ ಮೂಲ ಮಾಧವವೊಳಗೆ ಪೊಳೆವಾ । ದರುಶನವ ಕೊಡುತಲಯ್ಯ ಅಯ್ಯಾ ಅಯ್ಯಾ ॥೮॥ ಅರುಣೋದಯದಲದ್ದು ಶುಧ್ಧಾತ್ಮರಾಗಿ । ಹರಿಪರನೆಂಬೊ ಜ್ಞಾನದಲಿ ಹಾಡಿ ಪಾಡಿದವರ । ತೆರಳಿ ಪೋಗದೆ ದುರಿತರಾಶಿಗಳ ದಹಿಸಿ ನಿಂ। ದಿರದೆ ಸಂತರ ಕೂಡಿಸಿ । ಪೊರೆವುತಿಪ್ಪದು । ಗಡಾ ಸಿದ್ಧಾರ್ಥ ಕ್ಷೇತ್ರವಿದು । ನೆರೆನಂಬಿ ಮಾನವನು ಮಾನಸದಲಿ ಭಜಿಸಿ ಸಿರಿ ವಿಜಯ-ವಿಠ್ಠಲನ್ನ ಕರುಣ ಉನ್ನವನಿಗೆ ದೊರಕುವದು ದೊರಕುವದು । ಅಯ್ಯಾ ಅಯ್ಯಾ ॥ ೯ ॥



# ಗಂಗಾ ಮಂಗಳಾರುತಿ

( ಶ್ರೀ ವಿಜಯ ವಿಠ್ಠಲ )

೧೩ ಪದ        ರಾಗ–ಭೈರವಿ        ಝಂಪಿತಾಳ

ಮಂಗಳಂ ಮಹಗಂಗೆ ಭಕುತ ಮನೋಹಾರಿಗೆ | ಮಂಗಳಂ ಬಲುದುರಿತ ಸಂಹಾರಿಗೆ || ಮಂಗಳಂ ಪ್ರಯಾಗಕ್ಷೇತ್ರವಿಹಾರಿಗೆ || ಮಂಗಳಂ ಕುಸುಮ ಚಿತ್ರಹಾರಿಗೆ ||ಪ|| ವೇಣಿಗೆ ನಿತ್ಯ ಕಲ್ಯಾಣಿಗೆಪಲ್ಲವಾ ಪಾಣಿಗೆ ಗಂಭೀರ ಗುಣ ಶ್ರೇಣಿಗೆ ತ್ರಾಣಿಗೆ ಕೋಕಿಲಾ ವಾಣಿಗೆ | ಯಾದವನ ರಾಣಿಗೆ ಮಣಿಹೇಮ ಭೂಷಣಳಿಗ್ಗೆ ||೧|| ಖ್ಯಾತೆಗೆ ತ್ರಿಲೋಕ ಮಾತೆಗೆ | ಯಮುನ ಸಂಘಾತೆಗೆ | ಸರ್ವದಾ ಬಲು ನೀತೆಗೆ| ದಾತೆಗೆತುಹಿನ ಗಿರಿಜಾ-ತೆಗೆ | ಲಕುಮಿಯಾ ದೂತೆಗೆ ಅಮಿತಗುಣ ಪ್ರತಾಪಿಗೆ ||೨|| ಚನ್ನಿಗೆ ನಾರಿ-ಕುಲರನ್ನಿಗೆ ಭಾಗ್ಯ ಸಂಪನ್ನಿಗೆ | ಸಗರಕುಲ ಪಾಪನ್ನಿಗೆ | ಕಣ್ಣಿಗೆ ಪೊಳೆವ ಪ್ರಸನ್ನಿಗೆ | ಸೀತಸೂರ್ವನಿಗೆ ವಿಜಯ ವಿಠ್ಠಲ ಕನ್ನಿಗೆ ||೩||

# ಭಾಗೀರತಿ ( ಗಂಗಾ ) ದೇವಿ ಸ್ತೋತ್ರ

( ಶ್ರೀ ಗೋಪಾಲ ವಿಠ್ಠಲ )

೧೪ ಪದ–ರಾಗ        ತಾಳ ಏಕ

ಗಂಗೆ ಬಾರೆ ಮಂಗಳಾಂಗೆ ಬಾರೆ ದೇವೋತ್ತುಂಗೆ ಬಾರೆ ಕೃಪಾಪಾಂಗೆ ಬಾರೆ ||ಪ|| ಗೌರಿ ಬಾರೆ ಬಲು ಶೌರಿ ಬಾರೆ ದೋಷ ಸಾರಿ ಬಾರೆ ಸಿರಿ ತೋರಿ ಬಾರೆ || ೧ || ಜನನಿ ಬಾರೆ ಮಂದಾಕಿನಿಯೆ ಬಾರೆ | ಉದಾರ್ಯ ಗುಣಿಯೆ ಬಾರೆ ಬಲು ವಿನಿಯೆ ಬಾರೆ||೨||ಜಾಣಿ ಬಾರೆ ಕಮಲಾ ಪಾಣಿ ಬಾರೆ ಕೋಕಿಲ ವಾಣಿ ಬಾರೆ ಸಿಂಧುರಾಣಿ ಬಾರೆ ||೩|| ಗೋದೆ ಬಾರೆ ನೀನನಾದಿ ಬಾರೆ | ದೈತ್ಯ ಬಾಧೆ ಬಾರೆ ಎನ್ನ ಕಾದೆ ಬಾರೆ ||೪|| ಕೃಷ್ಣಿ ಬಾರೆ ಶುಭೋತ್ಕೃಷ್ಣಿ ಬಾರೆ| ಶರಣರಿಷ್ಟ ಬಾರೆ ಸರ್ವಾಭೀಷ್ಟೆ ಬಾರೆ|| ೫ ||

೧೫ ಪದ        ರಾಗ ತೋಡಿ        ತ್ರಿವಿಡಿ ತಾಳ

ಭಾಗೀರಥಿಯೆ ಭವನಾಶಿ ಸಾಗರನ ಅರಸಿ | ಭಾಗವತ ಜನಪೋಷಿ ||ಪ|| ಬಾಗುವೆ ನಿನ್ನ ಚರಣಗಳಿಗೆನ್ನ ಭವ| ರೋಗವ ನಿಗೋದ ಕೂಪಾ ಯೋಗವ ತೋರಿಸು|| ಲೋಕಪಾವನ್ನಿ ಕಲ್ಯಾಣಿ ಶಾಂತನ್ನ ರಾಣಿ | ಕೋಕಿಲ ವಾಣೀ

ಶುಭ ಗುಣೆ! ಶ್ರೀಕಂಠನ್ನ ಶಿರದ ಮನಿವಾಸ ಮಾಡಿದ್ದು । ಹೇ ಕರುಣಿ
ಭೀಷ್ಮನ್ನ ಜನನಿ ನಾಕೆರಡೊಸ್ಸುಗಳ ಸಾಕಿ । ನೀ ಭರ್ಗದಿ । ಹಾಕದೆ ಪುನಹ
ಲೌಕಿಕದೊಳಗಿನ್ನು। ಆಕಾರ ತೋರದೆ। ಏಕಾಂತದಿ ಪತಿಯ ಕೂಡಿ ಆಡಿದಾ
ಲೋಕವಿಲಕ್ಷಣೆ ॥೧॥ ವಾಲಿ ಸುಸೂಕ ಮುಡಿಯ ವೊಪ್ಪುವ ।ಬೈತಲಿಯು ನಿ
ಟ್ಟುಳ್ಳ ಬಾಲಿಯಾ ತಿಲುಕ ಕಸ್ತೂರಿ ಫಣಿಯು ಪುಬ್ಬುಗಳಾತಿ ಚಲುವಾಕೆಂಗೆಲ್ಲ
ಭಾಳಿಪ ಚಲಿಸುವ ಕರನ ಕುಂಡಲಾ ವದನಾದಿ । ಸುಳಿಫಲ್ಗಳು ಶೋಭಿಪ
ಸುಂದಾರೆ ಕೊ।ರಳಾ ಪದಕ ಪಚ್ಚಾ ನೀಲಿಯ ಶೀರಿಯುನುಟ್ಟು।ಜಾಲದೊಳು
ಮೆಲ್ಲಮೆಲ್ಲನೆ ಪಾದಾ ಇಡುವಾ ॥೨॥ ನೋಡಿದಾಮಾತ್ರ ನಿನ್ನನು ಮನದ
ಅಘವೆಲ್ಲ। ಓಡಿತು ಯಿರದತಿ ತಾನು । ಮಾಡೆ ನಿನ್ನಲಿ ಸ್ನಾನವನು ಅವನ
ಪುಣ್ಯಕ್ಕೆ ಈಡೆಲ್ಲ ಫಲವಾಗಾಣೆನು । ನೋಡಿಲ್ಲ ಪಾವನ ಮಾಡೊ ।
ವಿಷಯವಾಗಿ ನೋಡು ನಿನ್ನವತಾರ । ಮಾಡಿ ಮೆತ್ತೊಂದಿಲ್ಲ। ರೂಢಿ
ಗೋಪಾಲವಿಠ್ಠಲನೂ । ಮೂಡಿ ನಿನ್ನಲ್ಲಿ ವಾಸಾ ಮಾಡಿಪ ಸಾಧನ ॥೩॥

## (ಶ್ರೀ ಜಗನ್ನಾಥ ವಿಠ್ಠಲ)

೧೬ ಪದ ರಾಗ–ಕಾಂಬೋದಿ ಝಂಪಿತಾಳ

ಜನನಿ ಜಾನ್ಹವಿ ಜಗತ್ರಯ ಪಾವನೀ । ಪ್ರಣತ ಕೌಮುದೆ ಪದ್ಮ ಜಾಂಡಸಂ–
ಭೂತೇ॥ಪ॥ ವಿಷ್ಣುಪದ ಸಂಜಾತೆ ವಿಶ್ವಮಂಗಳೆ ಮಹೋತ್ಕೃಷ್ಟ ತೀರ್ಥ
ಗಳೋಳುತ್ತಮಳೆನಿಸುವೆ ॥ ಕ್ಲಿಷ್ಟವರ್ಜಿತವೆನಿಪ ತ್ರಿಪಥಗಾಮಿನಿ ದಯಾ ।
ದೃಷ್ಟಿಯಿಂದಲಿ ನೋಡು ಪ್ರತಿದಿನದಿ ಎನ್ನ ॥೧॥ ಕರ್ಕರಾಶಿಗೆ ಕರ್ಮಸಾಕ್ಷಿ
ಎಂದೆನಿಸುತಿಹ । ಅರ್ಕದೇವನು ಬಂದ ಸಮಯದಲ್ಲಿ ॥ ಶರ್ಕರಾಕ್ಷರು
ಸ್ನಾನಗೈದು ದುರಿತಗಳು ಸಂ। ಪರ್ಕವಾಗದ ತೆರದಿ ಸಂತೈಪೆ ದಯದಿ ॥೨॥
ಕಾರುಣಿಕೆ ಬಹಿರಾವರಣದಿಂದೆ ಪೊರಮಟ್ಟು ವಾರಾಹಿ ಒಡಗೂಡಿ ಭಕ್ತ-
ಜನರ॥ಪ್ರಾರಬ್ಧಕರ್ಮಗಳನುಣಿಸಿ ಮುಕ್ತರಮಾಳ್ಪೆ। ದೂರಗೈಸುವೆ ಸಂಚಿ-
ತಾಗಾಮಿಗಳನು ॥೩॥ ನಂದಿನೀ ನಳಿನಿ ಸೀತಾಮಲಾಪಹಾ । ಳೆಂದಮಾತ್ರದಿ
ಪುನೀತರನ ಮಾಳ್ಪೆ ಸಂದರುಶನ ಸ್ಪರಿಶನಸ್ನಾನಗಳ ಫಲ ಪುರಂದರಾದ್ಯರೆ
ಬಲ್ಲರಲ್ಪರರಿಯರು ನಿನ್ನ ॥೪॥ ಮಾತೆ ವಿಜ್ಞಾಪಿಸುವೆ ಬಿನ್ನಪವ ಕೇಳು ಸಂ।
ಪ್ರೀತಿಯಿಂದಲಿ ಕರುಣಿಸೆನಗೆಯಿದನೆ॥ ಶ್ರೋತವ್ಯ ಸಂಕೀರ್ತವ್ಯಸ್ತವ್ಯ
ಜಗನ್ನಾಥವಿಠ್ಠಲನೊಬ್ಬ ನೆಂದು ತಿಳಿವಂತೆ ॥೫॥

## (ಶ್ರೀಗುರು ಗೋಪಾಲ ವಿಠಲ)

೧೭ ಪದ ರಾಗ ಭೈರವಿ ಝಂಪಿತಾಳ

ಏನು ಪೇಳಲಿ ನಿನ್ನ ಆಗಮವನು | ಆನಂದಮಯ ಭುವನ ಪಾವನ ದಿವಿಜಗಂಗೆ ॥ಪ॥ ಮೊದಲು ನೀಹಿರಣ್ಯಹರಣಂಘ್ರಿಯಿಂದುದುಭವಿಸಿ ತದ-ನಂತರದಿ ಸುರರಾಧಿ ತನ್ನ ಉದಕಪಾತ್ರೆಯಲಿದ್ದು ಆತಕರದಿಜರಿದು | ಮುದದಿಂದ ಬ್ರಹ್ಮಾಘತನಯಶಿರಕಿಳಿದೆ ॥೧॥ ಗುರುತಲ್ಪಕನ್ನ ಸಂಯೋ-ಗವನುಮಾಡಿ ನೀ | ಗರಳಕಂಧರನ ಜಡೆಯಿಂದಲಿಳಿದೂ || ಧರೆಯೊಳಗೆ ಕಪಿಲದ್ರೋಹಿಗಳ ಸ್ಪರುಶವಮಾಡಿ ಹರುಷದಲಿ ಜಲಧಿಸಂಗವ ಮಾಡಿದೆಲೆ ದೇವಿ ॥೨॥ ಪತಿತ ಜಡಮತಿ ಕುಗತಿಗಳ ನೋಡಿದದರಿಂದ ನೀ | ಪತಿತಳಾದೆ ಜಡ ಕುಗತಿಯೈದಿದೆ | ಕ್ಷಿತಿಯೊಳಗೆ ಅವರು ನನ್ನನು ನೋಡಿದಾಕ್ಷಣಕೆ | ಅತಿಪಾವನತ್ವ ಸುಗತಿ ಸುಮತಿಯ ಪಡೆದರು ॥೩॥ ಈಪರಿಯು ನಾನಿನ್ನತು-ತಿಸೆನ್ನ ಪಂಚಮಹಾ | ಪಾಪ ಪತಿತತ್ವ ಜಡಮತಿ ಕುಗತಿಯು | ಅಪಾರ ದೋಷಗಳು ಕಳೆದು ನಿನ್ನೊಲಿಮೆಯಲಿ ಶ್ರೀಪತಿಯ ಪೊಲಿಸುವದಕ್ಕೆ ಅಧಿ-ಕಾರಿ ನಾನಾದೆ ॥೪॥ ಭಾಗೀರಥಿ ಎಂದು ನಾನಿನ್ನ ಸ್ಮರಿಸಿದರೆ| ಈಗ ಭವ-ನಾಶಿಯು ಎನಗಾದೆ ನೀ|| ಯೋಗ ಪ್ರಭಾವಕ್ಕೆ ಎಣೆಗಾಣೆ ನಮೋ ನಮೋ| ಶ್ರೀಗುರುಗೋಪಾಲ ವಿಠ್ಠಲನ್ನ ಪ್ರಿಯಸುತೆ ॥೫॥

## (ಶ್ರೀ ಪ್ರಾಣೇಶ ವಿಠ್ಠಲ)

೧೮ ಪದ ರಾಗ- ಮೋಹನಕಲ್ಯಾಣಿ ತಾಳ-ಅಟ್ಟ

ಭಾಗೀರಥಿದೇವಿ ನಮೋ ನಮೋ | ಭಾಗೀರಥಿದೇವಿ ಭಯನಿವಾರಣಗಂಗೆ| ಸಾಗರನರ್ಧಾಂಗಿ ಸುತರಂಗೆ||ಪ|| ವಾಮನ ವಾಮಪಾದಾಂಗುಷ್ಠ ನಖ ಸೋಕಿ| ಆಮಹಾ ಬ್ರಹ್ಮಾಂಡ ಸೀಳಲು || ತಾಮರಸಜ ಲೋಕಕ್ಕಿಳಿದು ಮಜ್ಜನ-ವಾಗಿ| ಸ್ವಾಮಿ ಪಾದೋದಕಳೆನಿಸಿದೆ ||೧|| ಹರಿಪಾದ ಜಲ ದೊರಕುವದು ದುರ್ಲಭವೆಂದು|ಹರ ಪ್ರಾರ್ಥಿಸಲು ಜಡೆಯೊಳು ನಿಂದೆ||ಭಾಗಿ||ಮೊರೆಯಿಡೆ ದೇವತೆಗಳಿಗೆ ಪೊಲಿದುಬಂದು| ಸುರನದಿಯೆಂದು ಕರಸಿಕೊಂಡೆ||೨|| ಚನ್ನಾಗಿ ಸ್ವರ್ಗದೊಳಗೆ ನಿಂತ ಕಾರಣ | ಸ್ವರ್ನದಿಎಂದು ಕರಸಿದೆವ್ವ ||ಭಾ|| ಉನ್ನತ ಧ್ರುವಮಂಡಲಕೆ ಪೋಗಿ ಮುಟ್ಟಿದೆ | ನಿನ್ನಾಕಾಶಗಂಗೆ ಎಂಬೋರೆ ||೩|| ಭಗಿರಥ ಬಹುಕಾಲ ಪ್ರಾರ್ಥಿಸೆ ಕರುಣದಿಂ| ಜಿಗಳಿ ಹೇಮಾದ್ರಿಗೆ ನಡೆತಂದೆ||

||ಭಾ'| ಸೊಗಸಿಲಿಂ ತ್ರಿಪಥಾಗಿ ದಕ್ಷಿಣದಲಿ ಬಂದು| ಸಗರರಾಯನ ಪುದ್ಧರಿಸಿದೆ ||೪|| ತವಕದಿಂದಲಿ ಜನ್ನುಋಷಿಯಲ್ಲಿ ಜನಿಸಿ ಜಾ|ನ್ಹವಿಯೆಂದು ಸ್ತುತಿಸೋರೆ ಸುರರೆಲ್ಲ || ಭಾ|| ಭುವನದೊಳೆಲ್ಲರು ಪುನಿತರಾಗೊದು ಸಿದ್ಧ | ತವಪಾದ ಸ್ಮೃತಿಮಾತ್ರದಿಂದಲಿ ||೫|| ನಂದಿನಿ ನಳಿನಿ ಸೀತಾ ಮಾಲತೀ ಮಲಹ | ಮಂದರಧರ ಪದಿ ಶ್ರೀ ಗಂಗೆ ||ಭಾ|| ಸುಂದರ ತ್ರಿಪಥ ಭಾಗೀರಥಿ ಭೋಗವತಿ | ವಂದೆ ಜಾನ್ಹವಿ ತ್ರಿದಶೇಶ್ವರಿ || ೬ |: ವಸುಗಳ ಮಾತು ಲಾಲಿಸಿ ರಾಯನಲಿ ಬಂದು. ಬಸುರಿಂದ ಪಡೆದು ಉದ್ಧರಿಸಿದೆ||ಭಾ|| ಅಸಹ್ಯ ಕರ್ಮವ್ಯಾಕೆಂದೆನಲು ಕುಮಾರನ | ಕೊಸರುತ ನಿಜರೂಪವೈದಿದೆ ||೭|| ನಮೋ ನಮೋ ಶುಭಗಾತ್ರೆ ನಮೋ ನಮೋ ಸುಚರಿತ್ರೆ | ನಮೋ ಶಂತನುವಿನ ಮಿತ್ರೆ ||ಭಾ|| ಶಮದಮಾದಿಗಳಿತ್ತು ಪೊರೆ ಅನುದಿನದಲ್ಲಿ ಅಮರವಿನುತ ಪಾದಪಂಕಜೆ ||೮|| ಕಾಣಲು ಪಾಪಹರವು ಮುಕ್ತಿ ಅಹುದು| ಸ್ನಾನದ ಫಲವು ಬಲ್ಲವರಿಲ್ಲ||ಭಾಗಿ|| ಕ್ಷೋಣಿಯಮ್ಮಾಲುಳ್ಳ ಸರಿದ್ವರಳೆನಿಸುವೆ| ಪ್ರಾಣೇಶ ವಿಠಲನ್ನ ದಯದಿಂದ ||೯||

# ಶ್ರೀ ಗೋದಾವರಿ ನದಿಯ ಸ್ತೋತ್ರ

**( ಶ್ರೀ ಹಯವದನ )**

೧೯ ಪದ ಉದಯರಾಗ ಝಂಪಿತಾಳ

ಗೋದೆ ಸಮಸ್ತ ಫಲದೇ | ಸಾಧಿಸಿ ಸ್ನಾನವಮಾಡೆ ಮುಕುತಿಯನೀವೆ ||ಪ|| ಆದಿಯಲಿ ತ್ರಯಂಬಕನ ಜಡೆಯಲುದ್ಭವಿಸಿ | ಮೋದದಿ ಪಶ್ಚಿಮಕೆ ನಡೆದು ಬಂದೀ || ಮೇದಿನೀಗಿಳಿದು ಪರಿವುತಲಿ ತೀವರದಿಂದ | ಆದರದಿಂದಬ್ಧಿಯನು ಕೂಡಿದಿ ||೧|| ಬ್ರಹ್ಮಾದ್ರಿ ಶಿಖರದಿಂದುದ್ಭವಿಸಿ ನೀನು | ಬ್ರಹ್ಮಋಷಿಯಾದ ಗೌತಮಮುನಿಗೆ | ಬ್ರಾಹ್ಮರಿಂದಲಿ ಬಂದ ಗೋಹತ್ಯ ಪರಿಹರಿಸಿ | ಅಮ್ಮಮ್ಮ ಸಪ್ತಮುಖದಿಂದ ಸಾಗರ ನೆರದಿ ||೨|| ಔದುಂಬರ ವೃಕ್ಷಮೂಲದಿಂದುದ್ಭವಿಸಿ | ಉದಧಿಯನು ಕೂಡಬೇಕೆಂದು ಬರಲು || ಒದಗಿ ಗೌತಮ ಋಷಿಯು ಕುಶದಿಂದ ತಿರುಗಿಸಲು || ಸದಮಳ ಕುಶಾವರ್ತಳೆಂದೆನಿಸಿಕೊಂಡೆ ||೩|| ಸಿಂಹರಾಶಿಗೆ ಸುರಗುರುವು ಬರಲು ಕೇಳಿ | ಅಂಹ್ವಾ ರಾಶಿಗಳು ಸಂಹಾರಕಾಗಿ || ಬಂಹ್ವಾಯಾಸದಿಂದ ಬಂದು ನಿನ್ನನು ಕೂಡೆ | ಆಹ್ವನಳ ಪರಿಹರಿಸಿ ಭಕುತಿ ಮುಕುತಿಯ ಕೊಡುವೆ ||೪||

ವಿನಯುದಲಿ ಸ್ನಾನ ಪಾನವ ಮಾಡಿದವರಿಗೆ | ವನಜಾಕ್ಷ ಶ್ರೀ ಹಯವದನ ಹರಿಯಾ ॥ ಮಿನುಗುತಿಪ್ಪ ಮೋಕ್ಷಸಂಪದವಿಗೆ ಸಾಧನವಾದ । ಘನ ಜ್ಞಾನ ಭಕುತಿಯನು ಕೊಟ್ಟು ರಕ್ಷಿಸುವೆ ॥ ೫ ॥

(ಶ್ರೀ ವಿಜಯವಿಠಲ)

೨೦ ಪದ ಉದಯರಾಗ ಝಂಪಿತಾಳ

ಗೋದೆ ಅತಿ ಪುಣ್ಯಸಾಧೆ | ಮಾಧವನ ಚರಣಾರವಿಂದ ಪಾದೆ ॥ ಪಲ್ಲ ॥ ಇದ್ದಲ್ಲಿ ನಿನ್ನ ಸ್ಮರಣೆಯನು ಮಾಡಲು ಪಾಪ ಎದ್ದೋಡಿ ತಿರುಗಿನೋಡದೆ ಹೋಹವು ॥ ಸದ್ಭಕ್ತಿಯಿಂದ ನಿನ್ನನು ನೋಡಬೇಕೆನುತ | ಉದ್ಯುಕ್ತವಾಗೆ ಬ್ರಹ್ಮಹತ್ಯ ಪರಿಹಾರವು ॥೧॥ ಬಂದು ಹರುಷದಲಿ ಕಣ್ಣಲಿ ಕಂಡು ಶಿರವಾಗಿ । ವಂದನೆಯ ಮಾಡಿ ಸಾಷ್ಟಾಂಗೆರಗಲೂ ॥ ಹಿಂದಣಾ ಶತಕೋಟಿ ದುರಿತರಾಶಿಗಳೆಲ್ಲ । ಒಂದು ಉಳಿಯದಂತೆ ಬೆಂದು ಹೋಹವು ॥೨॥ ಅತಿವೇಗದಿಂದ ಒಂದು ಸ್ನಾನವನು ಮಾಡಲು । ಮತಿವಂತರನ ಮಾಡಿ ದುರ್ಮಾರ್ಗ ಬಿಡಿಸಿ ರತಿಪತಿ ಜನಕ ಸಿರಿ ವಿಜಯವಿಠಲನ್ನ | ಸ್ತುತಿಸಿ ಗತಿಪಡೆವಂತೆ ಧನ್ಯರನ ಮಾಡುವ ತಾಯಿ ॥ ೩ ॥

## ಶ್ರೀ ಗಂಗಾದೇವಿ ಶ್ರೀ ಕೃಷ್ಣವೇಣಿಗೆ ಬಂದ ಮಹಿಮೆ

(ಶ್ರೀ ವಿಜಯವಿಠಲ)

೨೧ ಪದ ರಾಗ–ಅಹಿರಿ ಝಂಪಿತಾಳ

ಏನುಕಾರಣ ಬಂದೆ ಗಂಗೆ । ನಾನೇನು ಪುಣ್ಯವನು ಮಾಡಿದವನಲ್ಲ ।।ಪಲ್ಲ।। ಕಾಶಿ ಪುರದಿಂದಲಿ ದೇಶ ನೋಡಲಿ ಬಂದ್ಯೋ । ದಾಸರ ಮಹಿಮೆಯೆನು ನೋಡುವೆನೆಂದು ಬಂದ್ಯೋ | ದೋಷವರ್ಜಿತ ವಾರಣಾಸಿ ತಡೆಯದಲೇ | ಲೇಸಾಗಿ ತಿಳಿಪುವದು ಭೀಷ್ಮನಾ ಜನನಿ ।।೧।। ಶಿಲನೀರು ಕುಡಿದು ಧರಿಸಲಾರದ ಬಂದ್ಯೋ । ಮಲಜನರ ದೋಷವನು ಕಳೆವೆನೆಂದುಬಂದ್ಯೋ ಕಲಿಯುಗಕೆ ಈ ಕೃಷ್ಣಾ ಅಧೀನಳೆಂದು ಬಂದ್ಯೋ ! ಸುಲಭ ತ್ರಿದೇಶ್ವರಿ ಗಂಗ ತಡೆಯದಲೆ । ನಿಲಜಾಲೆ ತಿಳಿಪುವುದು ನೀರಜಾನಯನೆ ।।೨।। ಸಜ್ಜನರ ನಿತ್ಯಕರ್ಮ

ಗಳ ನೋಡಲಿ ಬಂದ್ಯೊ । ಮಜ್ಜನವ ಮಾಡಿಸಿ ಎನ್ನ ಪೊರೆಯಲಿ ಬಂದ್ಯೊ। ಮಜ್ಜಗದೊಳಗೆ ಪೆಸರಾಗಿದ್ದೆನೆಂದು ಬಂದ್ಯೊ । ನಿರ್ಜರ ತಟನಿ ಸದ್ಗುಣ ಸಾಂದ್ರೆ ತಡೆಯದಲೆ ನಿಜವ ತಿಳಿಪುವುದು ಶ್ರೀವಿಜಯವಿಠಲನ ಸುತೆ ॥೩॥

# ಶ್ರೀ ಕೃಷ್ಣವೇಣಿ ಮಹಿಮಾ ಸ್ತೋತ್ರ

(ಶ್ರೀ ವಿಜಯ ವಿಠಲ)

೨೨ ಪದ　　　　ರಾಗ—ಕಲ್ಯಾಣಿ　　　　ತಾಳ

ಶ್ರೀ ಕೃಷ್ಣವೇಣಿ ಕಲ್ಯಾಣಿ । ಕಷ್ಟ ಪರಿಪರಿಪೆ ನಿತ್ಯಸಾಗರನ ರಾಣಿ । ಪ॥ ಅಜನ ನಿರೂಪಲಿ ಜಾಬಾಲಿ ಮುನಿ ಬಂದು । ಭಜಿಸಿದನು ನಿನ್ನ ಬಲು ದಿವಸಂಗಳು । ನಿಜವಾಗಿ ಹರನ ಜಡೆಯಲ್ಲಿ ಉದ್ಭವಿಸಿದೆ । ತ್ರಿಜಗದೊಳಗೆ ಮೆರದೆ । ತ್ರಿದಶಾಮರವಂದಿತೆ ॥೧॥ ಕನ್ಯಾರಾಶಿಗೆ ಜೀವಬಂದು ಪ್ರಾಪುತನಾಗೆ । ಹನ್ನೆರಡು ವರುಷಕೆ ವೊಮ್ಮೆ ಬಿಡಧೆ ॥ ಮನ್ನಿಸಿ ಭಕುತಿಯಿಂದ ವೊಂದು ಮಜ್ಜನ ಮಾಡೆ । ಧನ್ಯನ ಮಾಳ್ಪೆ ಬಲು ಘನ್ನೆ ತರಂಗಿಣಿ ॥೨॥ ಎತ್ತನೋಡಿದರತ್ತ ನಾಲ್ಕುವರೆ ಯೋಜನವು । ಕ್ಷೇತ್ರ ಪುಣ್ಯದೇವಿ ಎನಿಸಿಕೊಂಬೆ । ಸ್ತುತಿಸಲಳವೇ ನಿಮ್ಮ ಮಹಿಮೆ ಅನುಗಾಲ । ಮತ್ತ ಗಜಗಮನೆ ಮಲದೂರೆ ಮುಕ್ತಿಧಾರೆ ॥೩॥ ಪೋಗದಾ ಪಾಪಗಳಿರಲು ನಿನ್ನ ದರುಶನವು। ಆಗುತ್ತ ವೋಡಿಡವು ನೆಲೆಗಾಣದೆ ॥ ಬಾಗಿ ನಮೋ ನಮೋ ಎಂಬ ಭಾಗವತರ ಮನೆಯ ಬಾಗಿಲ ಕಾಯ್ವ ಭಾಗ್ಯವ ಕೊಡು ಕರುಣದಲಿ ॥೪॥ ಕಲಿಯುಗಕೆ ನೀನೆ ವೆಗ್ಗಳವೆಂದು ಬಂಧುಜನರು । ಒಲಿದು ಕೊಂಡಾಡುವರು ಸತತದಲ್ಲಿ । ಜಲನಿಧಿಯ ಎರಡು ವೊಗದಲ್ಲಿ ಮೆರೆದ ಮಹಾತಟಿನಿ ನೆಲೆಗೊಳಿಸು ವಿಜಯ ವಿಠಲನ ಚರಣದಲ್ಲಿ ॥೫॥

(ಶ್ರೀ ವಿಜಯ ವಿಠಲ)

೨೩ ಪದ　　　　ರಾಗ　　　　ತಾಳ

ಜಯ ಕೃಷ್ಣವೇಣಿ ದುರ್ಜನರ ಗಂಟಲಗಾಣಿ । ನಿಯುತಮತ ಗುಣಶ್ರೇಣಿ ನಿತ್ಯ ಕಲ್ಯಾಣಿ ॥ಪ॥ ಹರನ ಜಡೆಯಲಿ ಜನಿಸಿ ಪರಿಪಾದ ಜಲವೆನಿಸಿ । ಮುರಹರನ ವರ್ಣ ಪೆಸರವನೆ ಪೊತ್ತು ॥ ಧರೆಯೊಳಗೆ ಮಹಾಬಲೇಶ್ವರದಲ್ಲಿ ನೆಲೆಯಾಗಿ । ಪೊರದೆ ಶರಣಾಗತರ ದುರಿತಗಳ ತರಿದೆ ॥೧॥ ದೋಷರಹಿತಾ

ಥೆರೆಯೊಳು ಸಾಸಿರ ಭಾಗದಲಿ । ಆ ಸಲಿಲ ಬಿಂದು ಪವಮಾನ ಬಂದು ॥ ಬೀಸಿದಾ ಸಮಯದಲಿ ಜೀವರಾಶಿಯ ಮೇಲೆ ಸೂಸಿ ಬೀಳಲು ಕ್ಲೇಶ ಶೋಕವಿನಾಶ ॥೨॥ ಅಷ್ಟಾರ್ದ (ಥ) ಮಾಸ ಕೃಷ್ಣಪಕ್ಷ ಚತುರ್ದಶಿ । ಕೃಷ್ಣ ವಾರಾ ವಿಷ್ಣುತಾರೆಯಲ್ಲೀ ॥ ಕಷ್ಣಿ ಕೃಷ್ಣಾಯೆಂದು ನಿಷ್ಠೆಯಿಂದಲಿ ಮನ । ಮುಟ್ಟಿ ಸ್ನಾನವಮಾಡೆ ಕಷ್ಟ ಪರಿಹರಿಪ ॥೩॥ ಸುರ ಪಾಲಿ ಕಪಟಸಂಗಮ ಛಾಯಾ ಶ್ರೀಶೈಲ । ವರ ಚತುಸ್ಥಾನಗಳಲಿ ॥ ವಾಸ ಮಾಡಿ ಇರಲು ವಾರ ಣಾಸಿಯ ಫಲಗರೆದು ಜೀವನ್ಮುಕ್ತರನು ಮಾಡಿ ಪೊರೆದೆ ॥೪॥ ಕಲಿಯುಗದಿ ಕೃಷ್ಣಸ್ನಾನ ಕೃಷ್ಣಸ್ಮರಣೆ ವೆಗ್ಗಳವೆಂದು ಅಜನ ಸತಿ ಪೊಗಳಲು॥ ಜಲನಿಧಿಯ ಉಭಯ ಮುಖದಲಿ ಕೂಡಿ ಭಕುತರಿಗೆ । ಒಲಿದು ಸಿರಿ ವಿಜಯ ವಿಠ್ಠಲನ್ನ ಕಾಣಿಸಿದೆಯಾ ॥೫॥

## ( ಶ್ರೀ ಜಗನ್ನಾಥ ವಿಠ್ಠಲ )

೨೪ ಪದ ರಾಗ–ಸಾವೇರಿ ಝಂಪಿತಾಳ

ತ್ರಾಣಿ ಕೃಷ್ಣವೇಣಿ ಪ್ರಾಣಪತಿ ಪದಕಮಲ । ಕಾಣಿಸು ಹೃದಯದಿ ಸತ್ರಾಣಿ॥ ॥ಪ॥ ಯಮಧರ್ಮತನಯ ಶ್ರೀ ಕೃಷ್ಣನಂಗದಿ ಜನಿಸಿ ಕಮಲ ಸಂಭವನ ಲೋಕದಿ ಮೆರದೆಯೆ ॥ ಸುಮನಸರ ನುಡಿಗೇಳಿ ಲೋಕಗಳ ದುರಿತೋಪ। ಶಮನಗೈಸಲು ಬಂದೆ ತುಮುಲ ಹರುಷದಲಿ ॥ ಸ । ೧ ॥ ಭೂತನಾಥನ ಜಾಟಜೂಟದಿಂದುದ್ಭವಿಸಿ ಶ್ವೇತ ಪಿಂಗಳ ಶೈಲಶಿಖರಕಿಳಿದೆ । ಭೂತಳಕೆ ಭೂಷಣಳೆನಿಸಿ ಪೂರ್ವವನಧಿ ।ನಿಕೇತನವಗೈದಿ ಸುಖಿಸಿದ ನಿನ್ನ ಪತಿಯೊಡನೆ ॥೨॥ ಪ್ರಾಣಿಗಳು ನಿನ್ನ ಜಲಪಾನವನು ಗೈಯ್ಯೆ ನಿ। ತ್ರಾಣ ಸಂಸಾರ ವ್ಯಾಧಿಗೆ ಭೇಷಜೆ । ಪ್ರಾಣಪ್ರಯಾಣ ಪಾಥೇಯವೆಂದೇರಿ ನಿ। ರ್ವಾಣ ಪದ ವಿತ್ತು ಕಲ್ಯಾಣವಂತರ ಮಾಳ್ಪೆ॥೩॥ ಜನಪದಗಳಾಗೆ ಕಾನನವಾಗೆ ಮನ್ವಾದಿ। ದಿನಗಳೆಲ್ಲಾಗೆ ಮತ್ತಾವಗಲೀ ॥ ಮನುಜ ಮಜ್ಜನಗೈಯ್ಯೆ ವಾಜಿಪೇಯಾದಿ ಮಖ। ವನುಸರಿಸಿದಡಕೆ ಫಲವೆನೋತ ತತ್ಫಲವೀವೆ ॥೪॥ ಅರವತ್ತು ಸಹಸ್ರ ವರುಷಂಗಳಲ್ಲಿ । ನಿರ್ಜರ ತರಂಗಿಣಿಯ ಮಜ್ಜನದ ಫಲವು ॥ ಗುರುವು ಕನ್ಯಸ್ಥನಾಗಿರಲು ವೊಂದಿನವಿಂದ । ನರರಿಗಾಪುಣ್ಯ ಸಮವೆನಿಸಿ ತತ್ಫಲವೀವೆ ॥೫॥ ಮನನಶೀಲ ಸುಯೊ।ಗಿಗಳೀಗಾವಗತಿ ಆಹ। ಅನುದಿನದ ನಿನ್ನ ತೀರದಲಿಯಿಪ್ಪ ।। ಮನುಜೋತ್ತಮರಿಗೆ ಆ।ಗತಿಯಿತ್ತು ಪಾಲಿಸುವೆ । ಅನುಸಮ ಸುಕಾರುಣ್ಯಕೆಣೆಗಾಣೆ ಜಗದೊಳಗೆ ॥ ೬ ॥ ತಾಯೆ ಎನ್ನನುದಿನ ಹೇಯ

